# ಪ್ರಬೋಧ ತರಂಗಗಳು



ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

www.thraithashakam.org





# ಪ್ರಬೋಧ ತರಂಗಗಳು


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000 **ಬೆಲೆ. 70/–**

## "ಇಂದೂ ಜ್ಞಾನವೇದಿಕೆ" ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## "ಇಂದೂ ಜ್ಞಾನವೇದಿಕೆ" ಪ್ರಕಟಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# 'ಇಂದೂ ಜ್ಞಾನವೇದಿಕೆ' ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮಿಣಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆಂಟ್ ರೋಡ್, ಚಾಮರಾಜ
ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಮೊದಲ ಮಾತು



"ಪ್ರ" ಎಂಬ ಅಕ್ಷರಕ್ಕೆ ವಿಶಿಷ್ಟವಾದ ಅರ್ಥವಿರುವುದು. ಪಂಚ ಭೂತಗಳನ್ನು ಪಂಚ ಎಂದು ಕರೆಯುತ್ತ ಅದರ ಮುಂದೆ "ಪ್ರ"ವನ್ನು ಸೇರಿಸುವುದಾಗಿದೆ. ಅದರೊಂದಿಗೆ ಪ್ರಪಂಚವಾಗಿದೆ. ಹಾಗೆ ಲಯಕ್ಕೆ ಮುಂದೆ "ಪ್ರ" ವನ್ನು ಸೇರಿಸಲಾಗಿದೆ ಅದರೊಂದಿಗೆ ಪ್ರಳಯವು ಆಗಿದೆ. ಹೀಗೆ ಇರುವುದಕ್ಕೆ ವಿಶಿಷ್ಟತೆಯನ್ನು ವಿಶೇಷತೆಯನ್ನು ಸೇರಿಸುವುದು "ಪ್ರ" ಎಂದು ತಿಳಿಯಿರಿ. ಅದೇ ಪದ್ಧತಿಯಲ್ಲಿ ಇಲ್ಲಿ ಬೋಧಗೆ "ಪ್ರ"ವನ್ನು ಸೇರಿಸಲಾಗಿದೆ ಅದರೊಂದಿಗೆ ಪ್ರಬೋಧವಾಗಿದೆ. ಪ್ರಬೋಧ ಎಂದರೆ ವಿಶಿಷ್ಟವಾದ ಬೋಧನೆ ಎಂದು, ಎಲ್ಲಾ ಬೋಧನೆಗಳಿಗಿಂತಲೂ ಪ್ರತ್ಯೇಕತೆ ಪ್ರಾಮುಖ್ಯತೆ ಇರುವ ಬೋಧನೆಯೆಂದು ತಿಳಿಯುತ್ತಿದೆ. ನಾವು ಹೇಳುವ ಬೋಧನೆಯಲ್ಲಿ **ಪ್ರತ್ಯೇಕ ತ್ರೈತ ಸಿದ್ಧಾಂತವು ಇರುವುದರಿಂದಲೇ ಪ್ರಬೋಧ ಎಂದು ಹೆಸರು** ಇಡಲಾಗಿದೆ. ನಮ್ಮ ಬೋಧನೆಗಳಲ್ಲಿನ ಸಾರಾಂಶವಾದ ಕೆಲವು ವಾಕ್ಯಗಳನ್ನು **"ಪ್ರಬೋಧ ತರಂಗಗಳು"** ಎಂದು ಹೆಸರು ಇಟ್ಟು ಬರೆಯುವುದು ನಡೆದಿದೆ. ವೇಮನ ಪದ್ಯಗಳಲ್ಲಿ ಬಹಳ ಅರ್ಥಕೂಡಿಕೊಂಡಿರುವಹಾಗೆ ಈ ಪ್ರಬೋಧ ತರಂಗಗಳಲ್ಲಿಯೂ ಸಹ ವಿಶೇಷ ಅರ್ಥವಿರುವುದೆಂದು ತಿಳಿಸುತ್ತಿದ್ದೇವೆ.

ಭಾಷೆ ಪ್ರಾವೀಣ್ಯತೆ ಇಲ್ಲದ ಈ ವಾಕ್ಯಗಳಲ್ಲಿ ಭಾವ ಪ್ರಾವೀಣ್ಯತೆ ಹೆಚ್ಚಾಗಿ ಇರುವುದು. ಅನೇಕ ಪುಸ್ತಕಗಳಲ್ಲಿ ಹತ್ತು ಪುಟಗಳು ಓದಿದರೂ ಅದರಲ್ಲಿ ಗುರುತಿಸುವಂತಹ ವಿಷಯಗಳಿರುವುದಿಲ್ಲ. ಓದುವುದಕ್ಕೆ ಇಂಪಾಗಿ ಇದ್ದಲ್ಲಿಯೂ ಅದರಲ್ಲಿ ಗ್ರಹಿಸಬೇಕಾದ ವಿಷಯವು ಇಲ್ಲ, ಆದ್ದರಿಂದ ಅವು ಎಷ್ಟು ಓದಿದರು ಲಾಭವಿರುವುದಿಲ್ಲ. ನಮ್ಮ ಗ್ರಂಥಗಳಲ್ಲಿ ಹಾಗಲ್ಲದೆ ಪ್ರತಿ ಪುಟದಲ್ಲಿಯೂ ಸ್ವಲ್ಪ ಹೊಸವಿಷಯವೂ, ಗುರುತಿಸುವಂತಹ ಸಾರಾಂಶ ವಿರುವುದು. ಅಷ್ಟೇ ಅಲ್ಲದೆ ನಾವು ಹೇಳುವ ವಿಷಯಗಳು ಇನ್ನೂ ಸುಲಭವಾಗಿ ಅರ್ಥವಾಗುವ ಹಾಗೆ ಒಂದೊಂದು ಸಾರಾಂಶವನ್ನು ಒಂದೊಂದು ವಾಕ್ಯವಾಗಿ ಬರೆದಿದ್ದೇವೆ. ಹಾಗೆ ಬರೆದಿರುವುದೇ ಈ **"ಪ್ರಬೋಧ ತರಂಗಗಳು"** ಎನ್ನುವ ಗ್ರಂಥವು. ಈ ಗ್ರಂಥದಲ್ಲಿ ಎಂಟುನೂರ ಇಪ್ಪತ್ತೆರಡು ವಾಕ್ಯಗಳಿರುವವು. ಪ್ರತಿ ವಾಕ್ಯವು ಮಹತ್ವಪೂರ್ಣ ಜ್ಞಾನ ಸಂದೇಶವಾಗಿರುವುದು.

ಕೆಲವರ ಮನಸ್ಸಿನಲ್ಲಿ ಎಷ್ಟೋ ಕಾಲದಿಂದ ಇರುವ ಸಂಶಯಗಳಿಗೆ ಮತ್ತು ಎಷ್ಟು ಗ್ರಂಥಗಳನ್ನು ಓದಿದ್ದರೂ ತೀರದ ಪ್ರಶ್ನೆಗಳಿಗೆ, ನೇರವಾಗಿ ಉತ್ತರ ಹೇಳಿದ ಹಾಗೆ ಇದರಲ್ಲಿ ವಾಕ್ಯಗಳು ಇರುವವು. ಪ್ರತಿ ವಾಕ್ಯವು ಒಂದು ಹೊಸ ವಿಷಯವನ್ನು ತಿಳಸುತ್ತಾ, ಕೆಲವು ಪ್ರಶ್ನೆಗಳ ಸಮೂಹಗಳಿಗೆ ಒಂದೇ ಉತ್ತರವಾಗಿದೆ. ಕೆಲವು ವಾಕ್ಯಗಳು ಪ್ರತ್ಯೇಕವಾಗಿ ಒಂದೊಂದು ಒಂದು ಗ್ರಂಥದ ಸಾರಾಂಶವನ್ನು ಒಳಗೊಂಡಿವೆ. ಆದ್ದರಿಂದ ಜ್ಞಾನ ಜಿಜ್ಞಾಸುಗಳಿಗೆ ಅಧಿಕವಾಗಿ ಒಳಿತು ಮಾಡುತ್ತವೆಂದು ನಾವು ನಂಬುತ್ತಿದ್ದೇವೆ. ನಮ್ಮಿಂದ ಹೇಳಲಾಗುವ ಪ್ರತಿ ವಿಷಯಕ್ಕು ಶಾಸ್ತ್ರಬದ್ಧತೆ ಇರಬೇಕೆನ್ನುವುದು ನಮ್ಮ ಉದ್ದೇಶ. ಶಾಸ್ತ್ರಬದ್ಧತೆ ಇಲ್ಲದ ಎಷ್ಟೋ ಉನ್ನತ ವಿಷಯವಾದರು ಆಗ ಕೇಳುವುದಕ್ಕೆ ಚೆನ್ನಾಗಿದ್ದರು ನಂತರ ಜೀವನದಲ್ಲಿ ಉಪಯೋಗಕ್ಕೆಬರದು. ಕಿತ್ತಳೆ ಹಣ್ಣಿನ ರಸವು ತಕ್ಷಣವೇ ಕುಡಿಯುವುದಕ್ಕೆ ರುಚಿಯಾಗಿ ಚೆನ್ನಾಗಿರುತ್ತದೆ, ಆದರೆ ಒಂದು ಅರ್ಧ ಗಂಟೆ ನಂತರ ಹಾಳಾಗಿ ರುಚಿ ಬದಲಾಗಿರುವುದು. ಸದ್ಯಕ್ಕೆ ಚೆನ್ನಾಗಿಗಿರುವ ಕಿತ್ತಲೆ ಹಣ್ಣಿನ ರಸವು ಭವಿಷ್ಯತ್ತಿನಲ್ಲಿ ಕುಡಿಯಲು ಉಪಯೋಗಕ್ಕೆಬಾರದು. ಆದರೆ ಜೇನು ಹಾಗಲ್ಲದೆ ಮೊದಲು ಹೇಗಿರುವುದೊ ಹಾಗೆಯೇ ಇರುವುದು, ಎಷ್ಟು ಕಾಲವಾದರು ರುಚಿ ಬದಲಾಗದೆ ಯಾವಾಗಲು ಉಪಯೋಗಕ್ಕೆ ಬರುವುದು. ಈ ವಿಧವಾಗಿಯೇ ನಮ್ಮಬೋಧನೆಗಳು ಜೀವನದಲ್ಲಿ ಎಂದಿಗಾದರೂ ಉಪಯುಕ್ತವಾಗಿಯೇ ಇರುವವೆಂಬ ನಂಬಿಕೆ. ಕೇಳಿದಾಗ ರುಚಿಯಾಗಿದ್ದು ನಂತರ ಜೀವನದಲ್ಲಿ ಉಪಯೋಗಪಡದ ಜ್ಞಾನ ವಿಷಯಗಳಲ್ಲದೆ, ಯಾವಾಗಲು ಒಂದೇ ಜ್ಞಾನ ಸಾರಾಂಶವು ಇದ್ದು ನಮ್ಮ ನಿತ್ಯ ಜೀವನದಲ್ಲಿ ಉಪಯೋಗ ಪಡುವವೇ ಈ **ಪ್ರಬೋಧ ತರಂಗಗಳು** ಎಂದು ತಿಳಿಸುತ್ತಿದ್ದೇವೆ.

ಇಂತಿ

**ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ**

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

1. ಕಬ್ಬಿನಿಂದ ರಸವನ್ನು ಆಸ್ವಾದಿಸಿ ಸಿಪ್ಪೆಯನ್ನು ಬಿಡುವಹಾಗೆ, ಗ್ರಂಥದಲ್ಲಿನ ಭಾವವನ್ನು ಗ್ರಹಿಸಿ ಭಾಷೆಯನ್ನು ಬಿಡುವವರು ಪರಿಶುದ್ಧ ವಾಚಕರು (ಓದುಗರು).
2. ನಿರಂತರ ಆತ್ಮ ಚಿಂತನೆಯಿಂದ ನಿನ್ನ ನೀನು ತಿಳಿದುಕೊಳುವುದೇ ನಿಜವಾದ ನಿನ್ನ ಸ್ವಂತಕೆಲಸ.
3. ಜ್ಞಾನ ಮಾರ್ಗದಲ್ಲಿ ಪ್ರಯಾಣಿಸಬೇಕೆಂದುಕೊಳ್ಳುವವರಿಗೆ ಅಜ್ಞಾನಿಗಳೇ ಕಂಟಕ (ಮುಳ್ಳು) ಸಮಾನರಾಗಿ ಅವರೋಧನೆಗಳನ್ನು ಕಲ್ಪಿಸುತ್ತಿರುತ್ತಾರೆ.
4. ಹುಚ್ಚನಿಗೆ ರತ್ನವನ್ನು ಕೊಟ್ಟರೂ ಅದರಿಂದ ಅವನು ಪ್ರಯೋಜನವನ್ನು ಪಡೆಯದ ಹಾಗೆ ಮೂರ್ಖ ಚಿತ್ತನಿಗೆ ಜ್ಞಾನೋಪದೇಶವು ಮಾಡಿದರು ಅದರಿಂದ ಅವನು ಪ್ರಯೋಜನವನ್ನು ಪಡೆಯುವುದಿಲ್ಲ.
5. ಆಹಾರ ಪದಾರ್ಥಗಳಿಂದ ಶರೀರವು, ಗುಣವಿಷಯಗಳಿಂದ ಮನಸ್ಸು ಜೀವಿಸುತ್ತಿರುವುದು.
6. ಜ್ಞಾನೇಂದ್ರಿಯಗಳಿಂದ ಕೂಡಿದ ಮನಸ್ಸು ವಿಷಯಗಳನ್ನು ಜೀವಿಗೆ (ಜೀವಾತ್ಮನಿಗೆ) ತಿಳಿಸುವುದು. ಜೀವಿಯು ಅಜ್ಞಾನವಶದಲ್ಲಿ ಅಹಂಕಾರದಿಂದ ಕೂಡಿ ಆ ವಿಷಯ ಸುಖದುಃಖಗಳನ್ನು ಅನುಭವಿಸುವನು.
7. ಅಲ್ಪ ಸುಖಗಳನ್ನು ಬಯಸುವ ಜೀವಿಯು ಅಜ್ಞಾನದಿಂದ ಅನಂತ ಕಷ್ಟಗಳೆಷ್ಟೋ ಎದುರಿಸುತ್ತಿದ್ದಾನೆ.
8. ಬಾಹ್ಯನೇತ್ರಗಳಿಗೆ ಕಾಣಿಸುವ ಕತ್ತಲು ಸೂರ್ಯೋದಯದಿಂದ ಅದೃಶ್ಯವಾಗುವುದು. ಮನೋನೇತ್ರಗಳಿಗೆ ಇರುವಂತಹ ಕತ್ತಲು ಜ್ಞಾನೋದಯದಿಂದ ಅದೃಶ್ಯವಾಗುವುದು.
9. ದೇಹಶುದ್ಧಿಗೆ ಸ್ನಾನವು ಅವಶ್ಯಕ, ದೇಹಿ(ಜೀವಾತ್ಮ) ಶುದ್ಧಿಗೆ ಜ್ಞಾನವು ಅವಶ್ಯಕ.

10. ಒಂದು ಜನ್ಮದಲ್ಲಿ ಶರೀರದೊಳಗೆ ಜೀವಾತ್ಮ ಪ್ರವೇಶಿಸುವುದು ಒಂದು ಪರ್ಯಾಯವಾದರೆ ಮತ್ತು ನಿಷ್ಕ್ರಯಿಸುವುದು ಕೂಡ ಒಂದು ಪರ್ಯಾಯವೆ.

11. ಜೀವ ಶರೀರಗಳು ಭೂಮಿಮೇಲೆ ಜನ್ಮಿಸುವ ವಿಧಾನವು ಎಲ್ಲದಕ್ಕು ಒಂದೇರೀತಿಯಾಗಿ ಇರುತ್ತದೆ. ಆದರೆ ಮರಣಿಸುವುದು ಮಾತ್ರ ನಾಲ್ಕು ವಿಧಾನಗಳಾಗಿ ಇರುತ್ತದೆ.

12. ಜೀವಿಯು ಕರ್ಮವನ್ನು ಅನುಭವಿಸುವುದರಿಂದ ಕಳೆದು ಹೋಗುತ್ತಿರುವುದು, ಆದರೆ ಅಹಂಕಾರವು ಮತ್ತಷ್ಟು ಕರ್ಮವನ್ನು ಸಂಪಾದಿಸಿ ಇಡುತ್ತಿರುವುದು.

13. ಅಜ್ಞಾನದಿಂದ ಅಹಂಕಾರವು, ಅಹಂಕಾರದಿಂದ ಆಗಾಮಿಕರ್ಮವು ಜೀವಿಗೆ ಉಂಟಾಗುತ್ತಿರುವುದು.

14. ಪರಿಶುದ್ಧವಾದ ಔಷಧವನ್ನು ಸೇವಿಸಿದ ಶರೀರ ರೋಗವನ್ನು ಬಿಟ್ಟುಹೋಗುವ ಹಾಗೆ, ಪರಿಶುದ್ಧ ಜ್ಞಾನಶಕ್ತಿಯನ್ನು ಪಡೆದ ಜೀವಿಯನ್ನು ತನ್ನಕರ್ಮರೋಗವು ಬಿಟ್ಟುಹೋಗುತ್ತದೆ.

15. ಆರೋಗ್ಯವನು ಕೊಡದ ಔಷಧವು, ಆತ್ಮಜ್ಞಾನವನು ಕೊಡದ ಬೋಧನೆಯು ನಿಷ್ಪ್ರಯೋಜನವೆ.

16. ಕಾಮ, ಕ್ರೋಧ, ಲೋಭ, ಮೋಹ, ಮಧ ಮಾತ್ಸರ್ಯಗಳೆನ್ನುವ ಆಯುಧಗಳಿಂದ ಜೀವಿಯು ತನ್ನ ತಾನೇ ಹಿಂಸಿಸಿಕೊಳ್ಳುತ್ತಿದ್ದಾನೆ.

17. ಶರೀರವೆಂಬ ಗೃಹದಲ್ಲಿ ಅಜ್ಞಾನವೆಂಬ ಅಂಧಕಾರದಲ್ಲಿರುವ ಜೀವಿಯು ಜ್ಞಾನದೀಪವನ್ನು ಬೆಳಗಿಸಿ ನೋಡಿಕೊಂಡರೇನೆ ತನ್ನನ್ನು ತಾನು ತಿಳಿಯಬಲ್ಲನು.

18. ಅಹಂಕಾರವು ತೊಲಗದೆ ಅಜ್ಞಾನವು ಅಂತ್ಯವಾಗುವುದಿಲ್ಲ. ಅಜ್ಞಾನವು ತೊಲಗದೆ ಆತ್ಮದರ್ಶನವಾಗುವುದಿಲ್ಲ.

19. ಪಂಚಭೂತಗಳಿಂದ ನಿರ್ಮಿಸಲ್ಪಟ್ಟ ಶರೀರಗಳು ಪಂಚಭೂತಗಳಿಂದಲೇ ನಾಶವಾಗುತ್ತಿವೆ.

20. ಅಷ್ಟೈಶ್ವರ್ಯಗಳಿಂದ ತುಂಬಿತುಳುಕುತ್ತಿರುವವರನ್ನು ನೋಡಿ ನಾನು ಹಾಗಿಲ್ಲವೆಂದು ಅಸೂಯೆಹೊಂದಿದರೆ ಪ್ರಯೋಜನವೇನು? ಹಿಂದಿನ ಜನ್ಮಗಳಲ್ಲಿ ಅವರು ಮಾಡಿಕೊಂಡ ಪುಣ್ಯಫಲವೇ ಅವರನ್ನು ಆ ಸ್ಥಿತಿಯಲ್ಲಿಟ್ಟಿರುವುದು.

21. ಅಪಾರವಾದ ಸಮುದ್ರದಲ್ಲಿನ ಜಲಬಿಂದುವಿನಂತಹದು ಶರೀರದಲ್ಲಿನ ಜೀವಾತ್ಮ.

22. ಬಾಹ್ಯಪೂಜೆಗಳಿಗಿಂತ ಭಾವಪೂಜೆಯೇ ದೇವರಿಗೆ ಇಷ್ಟವು.

23. ಆಹಾರಪದಾರ್ಥಗಳ ಪ್ರಭಾವದಿಂದ ಗುಣಪ್ರಭಾವಗಳು ಬದಲಾಗುವುದಿಲ್ಲ. ಆದರೆ ಗುಣಪ್ರಭಾವದಿಂದ ಯಾವಯಾವ ಆಹಾರಗಳು ತಿನ್ನಬೇಕೆನ್ನುವ ಅಭಿಲಾಷೆ ಉಂಟಾಗುವುದು.

24. ಮೀನು ಅದರ ಸ್ವಸ್ಥಾನವಾದ ನೀರಿನಲ್ಲಿ ಇದ್ದರೇನೇ ಅದಕ್ಕಾನಂದವು ಹಾಗೆಯೇ ಮನಸ್ಸು ಅದರ ಸ್ವಸ್ಥಾನವಾದ ಆತ್ಮದಲ್ಲಿದ್ದರೇನೇ ಅದಕ್ಕಾನಂದವು.

25. ಸಂಕಲ್ಪಗಳ ರಾಹಿತ್ಯವನ್ನು ಮಾಡಿಕೊಳ್ಳುವುದೇ ಸತ್ಯವಾದ ಬ್ರಹ್ಮಯೋಗವು.

26. ಆಡಂಬರದ ಪೂಜೆಗಳೆಲ್ಲಾ ಅಜ್ಞಾನಕ್ಕೆ ದಾರಿ ಮಾಡುತ್ತವೆ. ಆದರೆ ಆತ್ಮ ಭಾವವನ್ನು ಒದಗಿಸಲಾರವು.

27. ಪಾತ್ರೆ ತೊಳೆದು ಮಾಡಿದ ಪಾಕವೂ, ಪಾತ್ರವನ್ನರಿತು ಮಾಡಿದ ಜ್ಞಾನದಾನವು ಪರಿಶುದ್ಧ ಫಲನೀಡುವುದು.

28. ನೀತಿ, ನ್ಯಾಯವು ಬಾಹ್ಯೋನ್ನತಿಗೆ, ಜ್ಞಾನ, ಧರ್ಮವು ಆತ್ಮೋನ್ನತಿಗೆ ಆಧಾರವನ್ನು ಉಂಟುಮಾಡುತ್ತವೆ.

29. ಮಾಯೆ ಹೊರಗಿದೆಯೆಂದು ಭಾವಿಸಬೇಡ. ಅದು ನಿನ್ನಲ್ಲಿಯೇ ಇರುವುದು. ಮಾಯೆಯಲ್ಲಿ ಬೀಳುವುದು ಹೊರಗಡೆಯಲ್ಲ ನಿನ್ನ ತಲೆಯೊಳಗೆಂದು ತಿಳಿದುಕೋ.

30. ಅಪರಿಮಿತ ವೇಗದಿಂದ ತಿರುಗುವ ನಿನ್ನ ಮನಸ್ಸನ್ನು ಸ್ವಾಧೀನ ಮಾಡಿಕೋ ಆತ್ಮವೆಂದರೆ ಏನೋ ಅರ್ಥವಾಗುತ್ತದೆ.

31. ಮತಗಳು, ಕುಲಗಳು ಮಾನವರು ನಿರ್ಮಿಸಿಕೊಂಡಿರುವವೆ ಹೊರತು ಮಹಾತ್ಮರು ನಿರ್ಮಿಸಿದವುಗಳಲ್ಲ.

32. ದೇಹ ಭಾವವೇ ಮಾಯಪಾಶವು. ದೇಹಿ ಭಾವವೇ ದಿವ್ಯಜ್ಞಾನವು.

33. ಸರ್ವಜೀವಿಗಳಿಗೂ ಸಮನ್ವಯಿಸುವ ಶಾಸ್ತ್ರವನ್ನು ಬೋಧಿಸುವವನೇ ಜಗದ್ಗುರುವು.

34. ಗಾರುಡಿ(ಮಾಟ)ಯಂತಹ ವಿದ್ಯೆಗಳನ್ನು ನೋಡಿ ಜ್ಞಾನವೆಂದು ಭಾವಿಸುವುದು, ಮರುಭೂಮಿಯನ್ನು ನೋಡಿ ನೀರೆಂದು ಭಾವಿಸುವುದು ಎರಡು ಒಂದೇ.

35. ಕರ್ಮದಿಂದ ಗುಣಗಳು, ಗುಣಗಳಿಂದ ಮನಸ್ಸು, ಮನಸ್ಸಿನಿಂದ ಶರೀರವು ಚಲಿಸುತ್ತಿರುವುದು. ಅದು ತಿಳಿಯದೇ ಹೋದರೆ ಅಜ್ಞಾನವೇ ಆಗುವುದು.

36. ಬಾಹ್ಯಸಂಸಾರ ವ್ಯಾಮೋಹವೆನ್ನುವ ಮಧುಪಾನ ಮತ್ತಿಗೆ ಸತ್ಯವನ್ನು ತಿಳಿಯುವ ಸತ್ವ ಎಲ್ಲಿಯದು?

37. ಅಡ್ಡಾದಿಡ್ಡಿ ತಿರುಗುವ ಮನಸ್ಸನ್ನು ನಿಯಂತ್ರಿಸದೆ, ಗಡ್ಡವನ್ನು (ದಾಡಿಯನ್ನು) ಬೆಳೆಸಿ ತಿರುಗಿದರೂ ಕರ್ಮ ತೊಲಗುವುದಿಲ್ಲ.

38. ಉನ್ನತ ಜ್ಞಾನವು ನಿನ್ನಲ್ಲಿ ಉತ್ಪನ್ನ ಮಾಡಿಕೊಳ್ಳದೇನೆ ಉಪದೇಶವು ಬೇಕೆಂದು ಉಪಟಳ ಪಡಬೇಡ. ಉಪದೇಶವನ್ನು ಭರಿಸುವಶಕ್ತಿ ನಿನ್ನ ಹೃದಯಕ್ಕಿದ್ದಾಗಲೇ ಆ ಉಪದೇಶವು ಸಿದ್ಧಿಸುವುದು.

39. ಜ್ಞಾನವನ್ನು ತಿಳಿದು ಮನಸ್ಸನ್ನು ಜಯಿಸಿದವನೇ ಮಹಾತ್ಮನು, ಆದರೆ ಅಜ್ಞಾನದ ಮಾತುಗಳನ್ನು ಹೇಳುವವನಲ್ಲ.

40. ಸೌಂದರ್ಯಗಳನ್ನು ನೋಡಿ ಆನಂದಿಸು, ಅಷ್ಟೇ! ಅವುಗಳನ್ನನು ಭವಿಸಬೇಕೆಂದು ಬಯಸಿದೆಯಾ ಆ ನಂತರ ಕಷ್ಟಗಳು ಎದುರಾಗುವವು.

41. ಶರೀರವನ್ನು ನಾಶಮಾಡಿ ಅದರಲ್ಲಿನ ಜೀವಿಯನ್ನು ಬೇರೆ ಮಾಡಬಲ್ಲರು, ಆದರೆ ಯಾವ ಮಾನವನು ಒಂದು ಶರೀರವನ್ನು ತಯಾರು ಮಾಡಿ ಅದರಲ್ಲಿ ಜೀವವನ್ನು ತುಂಬಿಸಲಾರನು.

42. ನಿಜವಾದ ಆತ್ಮಜ್ಞಾನವು ಅವಗಾಹನೆಯಾಗುವವರೆಗೂ ವಿಷಯಗಳ ವಿಷ ವಲಯ (ಚಕ್ರ) ದಿಂದ ಜೀವಿಯನ್ನು ಬಿಡಿಸುವುದಕ್ಕೆ ಸಾಧ್ಯವಾಗುವುದಿಲ್ಲ.

43. ಹಿಡಿತವಿಲ್ಲದೇ ನಿನ್ನಲ್ಲಿ ಆವಿರ್ಭವಿಸುವ ಆಲೋಚನೆಯ ತರಂಗಗಳಿಗೆ ಆಣೆಕಟ್ಟುಹಾಕು, ಆಗಲೇ ಅಲೌಕಿಕವಾದ ಆತ್ಮಭಾವವನ್ನು ಗ್ರಹಿಸಲ್ಪಡುವೆ.

44. ಆಸೆಯೇ ಆತ್ಮಾವಗಾಹನೆಗೆ ಆತಂಕವಾಗಲಿ ಹೆಂಡತಿಮಕ್ಕಳಲ್ಲ.

45. ಮತ ವಿಷಯಗಳ ಮಾಯೆಯಲ್ಲಿ ಬೀಳದೆ ಮಹೋನ್ನತ ಭಾವವನ್ನು ಬೆಳೆಸಿಕೋ ಆತ್ಮಶಿಖರವನ್ನು ಜಯಿಸಬಲ್ಲೆ.

46. ಸಮ್ಮತಿಯಿಂದ ಉದ್ಭವಿಸಿರುವವೇ ಎಲ್ಲಾ ಮತಗಳು, ಆದರೆ ಮತಿಯನ್ನು ನಿಲ್ಲಿಸುವಂತಹ ಮತವೇ ಮಹೋನ್ನತವಾದದ್ದು.

47. ಎಲ್ಲಾ ಮತಗಳು ಅಚಲಸ್ಥಿತಿಯವರೆಗೇ. ಆನಂತರ ಎಲ್ಲಾ ಕೊನೆಗೊಳ್ಳುವವು.

48. ಫಲಭರಿತವಾದ ಭೂಮಿಯಲ್ಲಿ ಹಾಕಿದ ಬೀಜವು, ಸತ್ಯವಂತನ ಹೃದಯದಲ್ಲಿ ನಾಟಿದ ಜ್ಞಾನವು ಸತ್ಫಲಿತವನ್ನು ಕೊಡುವವು.

49. ಅಜ್ಞಾನಜನಿತವಾದ ಪಶುಪಕ್ಷಿಮೊದಲಾದವು ಆಹಾರ, ನಿದ್ದೆ, ಸಂಭೋಗ ವಿಷಯ ಕಾರ್ಯಕಲಾಪಗಳಲ್ಲಿ ಜೀವಿಸುತ್ತಿವೆ. ಎಷ್ಟೋ ಜ್ಞಾನವಿರುವ

ಮಾನವನು ಹಾಗೆಯೇ ಆಚರಿಸಿದರೆ ಅವುಗಳಿಗೂ ಮಾನವನಿಗೂ ವ್ಯತ್ಯಾಸ ಏನಿರುವುದು?

50. ಅಹಂ ಅನ್ನು ಅಡಗಿಸಿ, ಕಾಯ(ಶರೀರ)ವನ್ನು ಕರ್ತವ್ಯಕ್ಕೆ ಬಿಟ್ಟವನೇ ನಿಜವಾದ ಕರ್ಮಯೋಗಿ.

51. ವಿಷಯವೆನ್ನುವ ಗಾಳಕ್ಕೆ ಸುಖವೆನ್ನುವ ಎರೆಯನ್ನು ತೊಡಗಿಸಿ ಆಸೆ ತೋರಿ, ಕರ್ಮವೆಂಬ ಬುಟ್ಟಿಯಲ್ಲಿ ಮೀನೆನ್ನುವ ಜೀವಿಯನ್ನು ಬಂಧಿಸುತ್ತಿರುವುದು ಮಾಯೆ ಎನ್ನುವ ಮೀನುಗಾರ.

52. ಕರ್ಮವೆಂಬ ತಪ್ಪಿಗೆ ಪ್ರಕೃತಿಯೆಂಬ ಸೆರೆಮನೆಯಲ್ಲಿ ಜೀವಿಯು ಶಿಕ್ಷೆಯನ್ನು ಅನುಭವಿಸುತ್ತಿದ್ದಾನೆ. ಕರ್ಮರಹಿತವಾದಾಗ ಜೀವಿಗೆ ಮೋಕ್ಷವೆಂಬ ಬಿಡುಗಡೆ ಲಭಿಸುವುದು.

53. ತಿರುಗಣೆಯನ್ನು ಆಧಾರವಾಗಿ ಮಾಡಿಕೊಂಡು ಚಕ್ರವು ಚಲಿಸುವ ರೀತಿಯಂತೆ ಆತ್ಮವನ್ನು ಆಧಾರವು ಮಾಡಿಕೊಂಡು ಕರ್ಮ ಗುಣ ಚಕ್ರಗಳು ಚಲಿಸುತ್ತಿರುವವು.

54. ದೇವರಿದ್ದರೆ ತೋರಿಸಿರೆಂದು ಹೊಡೆದಾಟಕ್ಕೆ ಇಳಿಯಬೇಡ. ಕರ್ಮವನ್ನು ಬಿಡು, ಕ್ಷಣದಲ್ಲಿ ಕಾಣಿಸುತ್ತಾನೆ. ಆಗ ನೀನೇ ದೇವರು.

55. ಗುಣಗಳನ್ನು ಆಜ್ಞಾಪಿಸುತ್ತಾನೆ ಗುರುದೇವನು, ಗುಣಗಳ ಆಜ್ಞೆಯಲ್ಲಿ ಚಲಿಸುತ್ತಾನೆ ಧರೆಜೀವನು.

56. ಗುಣಾತೀತನಾದ ದೇವರನ್ನು ಗುರುತಿಸಬೇಕಾದರೆ, ನೀನು ಕೂಡ ಗುಣಾತೀತನಾದರೇನೆ ಸಾಧ್ಯವಾಗುವುದು.

57. ಗುಣಗಳ ಕೂಟದಲ್ಲಿಬಿದ್ದು ತೂರಿಕೊಂಡು ಹೋಗಿರುವ ಜೀವಾ! ಆತ್ಮಜ್ಞಾನವನ್ನು ತಿಳಿದುಕೋ ನಿನ್ನನ್ನು ಹೊರಕ್ಕೆ ಅದೇ ಸೆಳೆಯುತ್ತದೆ.

58. ದೇವರ ಶಕ್ತಿಯಿಂದ ಪ್ರಭವಿಸಿದ ಪ್ರಕೃತಿ ಶರೀರ ಸಹಾಯದಿಂದ ಬದುಕಿ ಬಟ್ಟೆ ಉಡುತ್ತಿರುವ ಜೀವಾ! ದೇವರಿಲ್ಲವೆಂದು ಭಾವಿಸಬೇಡ.

59. ಸೌಂದರ್ಯಗಳೆಲ್ಲಾ ಪ್ರಕೃತಿಯದ್ದೇ, ಆದರೆ ಪರಮಾತ್ಮನಿಲ್ಲದೆ ಅವು ಪ್ರಕಾಶಿಸವು.

60. ಜ್ಞಾನ ದೃಷ್ಟಿಯಿಂದ ಪ್ರಕೃತಿಯನ್ನು ಪರಿಶೋಧಿಸು! ಪ್ರಕೃತಿಯಲ್ಲಿನ ಪರಮಾತ್ಮ ತತ್ತ್ವವನ್ನು ಪರಿಗ್ರಹಿಸಲ್ಪಡುವೆ.

61. ಜನ್ಮರಹಿತವೇ ಅದ್ವೈತಸಿದ್ಧಿ. ಆಲೋಚನೆ ಸಹಿತವೇ ಮಾಯಾಸಿದ್ಧಿ.

62. ಆಸನಾದಿಗಳ ಸಾಧನೆಗಳಿಂದ ಅಂಗಾರೊಗ್ಯವೇ ಉಂಟಾಗುವುದು. ಆದರೆ ಆತ್ಮೈಕ್ಯತೆ ಉಂಟಾಗುವುದಿಲ್ಲ. ಅವು ಆರೋಗ್ಯ ಆಸನೆಗಳೇ ಹೊರೆತು ಯೋಗಾಸನಗಳು ಅಲ್ಲ.

63. ವಿಕಲಾಂಗ ಜೀವಿಗಳನ್ನು ನೋಡಿ ವಿಚಾರಿಸುತ್ತಿರುವೆಯಾ? ಹಿಂದಿನ ಜನ್ಮಗಳಲ್ಲಿ ಅವರೆಷ್ಟು ಘೋರ ಪಾಪವನ್ನು ಮಾಡಿದ್ದಾರೊ! ಈಗ ಈ ವಿಧವಾಗಿ ಶಿಕ್ಷೆಯನ್ನು ಅನುಭವಿಸುತ್ತಿದ್ದಾರೆ.

64. ವೃದ್ಧಾಪ್ಯದಲ್ಲಿ ದೈವವನ್ನು ತಿಳಿದುಕೊಳ್ಳೋಣವೆಂದು ಊಹಿಸುತ್ತಿರುವೆಯಾ! ಚಿಂತೆಗಳ ಸಿಕ್ಕುಗಳಲ್ಲಿ ಸಿಲುಕಿ ನಲುಗಿ ಹೋದ ಮನಸ್ಸಿಗೆ ಆತ್ಮಾವಗಾಹನೆ ಅಂಟಿಕೊಳ್ಳದು.

65. ಮೋಕ್ಷವೆನ್ನುವ ಗೃಹದೊಳಗೆ ಪ್ರವೇವೇಶಿಸಬೇಕಾದರೆ ಮೂರು ಮೆಟ್ಟಿಲುಗಳನ್ನು ಹತ್ತಬೇಕಾಗಿ ಬರುತ್ತದೆ. ಅವುಗಳೇ (1) ಭಕ್ತಿ (2) ಜ್ಞಾನವು (3) ಯೋಗವು ಅಥವಾ ಪ್ರಾರಬ್ಧ, ಆಗಾಮಿ, ಸಂಚಿತ ಕರ್ಮಗಳನ್ನು ದಾಟಬೇಕಾಗಿ ಬರುತ್ತದೆ.

66. ಭಕ್ತಿಯಿಂದ ಜ್ಞಾನವು, ಜ್ಞಾನದಿಂದ ಯೋಗವು, ಯೋಗದಿಂದ ತತ್ತ್ವವು, ತತ್ತ್ವದಿಂದ ಮುಕ್ತಿ ಸಿದ್ಧಿಸುತ್ತದೆ.

67. ದೈವಜ್ಞಾನವೆಂದರೆ ಏನೋಅಲ್ಲ. ಆತ್ಮವಿಷಯಗಳನ್ನು ಅಂದರೆ ಧರ್ಮಗಳನ್ನು ತಿಳಿದುಕೊಳ್ಳುವುದೇ.

68. ಬಾಹ್ಯವಾಗಿ ಅಗ್ನಿಯಿಂದ ಮಾಡುವ ಯಜ್ಞ ಕಟ್ಟಿಗೆಗಳನ್ನು,

ಅಂತರಂಗದಲ್ಲಿ ಜ್ಞಾನಾಗ್ನಿಯಿಂದ ಮಾಡುವ ಯಜ್ಞ ಕರ್ಮಗಳನ್ನು ಸುಡುವುದು.

69. ಕರ್ಮವಿಲ್ಲದೇ ಕಣ್ಣ ರೆಪ್ಪೆಯೂ ಸಹ ಕದಲದು. ಅಹಂಇಲ್ಲದೇ ಯಾವಕರ್ಮವೂ ಬರುವುದಿಲ್ಲ.

70. ಜೀವಿಯ ಕರ್ಮವನ್ನು ಕಾರ್ಯರೂಪದಿಂದ ಕಷ್ಟಸುಖಗಳನ್ನು ಅನುಭವಮಾಡಿಸುವುದಕ್ಕೇ ಪ್ರಕೃತಿ ಶಕ್ತಿಗಳು ಒಳಗೆ ಹೊರಗೆ ಪ್ರಬಲವಾಗಿರುವವು.

71. ಜೀವಿಯು ಅಹಂಕಾರದಿಂದ ಮಾಡುವ ಎಲ್ಲಾ ಕೆಲಸಗಳಿಗೂ ಎರಡು ವಿಧಗಳ ಫಲಿತಗಳಿರುವವು, ಅವು (1) ಸ್ಥೂಲ ಫಲವು (2) ಸೂಕ್ಷ್ಮ ಫಲವು.

72. ಜೀವಿಯು ಹಿಂದಿನ ಜನ್ಮಗಳಲ್ಲಿ ಸೂಕ್ಷ್ಮ ಧನ ಅಂದರೆ ಕರ್ಮವನ್ನು ಈ ಜನ್ಮದಲ್ಲಿ ಸ್ಥೂಲವಾಗಿ ಅನುಭವಿಸುತ್ತಿದ್ದಾನೆ. ಈ ಜನ್ಮದಲ್ಲಿನ ಸೂಕ್ಷ್ಮಫಲವನ್ನು ನಂತರ ಜನ್ಮಗಳಲ್ಲಿ ಅನುಭವಿಸುತ್ತಿರುತ್ತಾನೆ.

73. ಜೀವಿಯು ಸಂಪಾದಿಸಿಕೊಳ್ಳುವುದು ಪಾಪವು, ಪುಣ್ಯವು. ಅನುಭವಿಸುವುದು ದುಃಖವು, ಸುಖವು.

74. ಒಳ್ಳೆಯದಾದರೂ, ಕೆಟ್ಟದಾದರು ಅದರ ಫಲಿತಗಳಮೇಲೆ ಆಸೆ ಬಿಟ್ಟು ಕಾರ್ಯಗಳು ಮಾಡಿದರೆ ಅವುಗಳ ಕರ್ಮ ಜೀವಿಗಳಿ (ಜೀವಾತ್ಮ) ಗಂಟದು.

75. ಮನಸ್ಸೆನ್ನುವ ಪ್ರಾಣಿಯನ್ನು ಜ್ಞಾನವೆನ್ನುವ ಖಡ್ಗದಿಂದ ಆತ್ಮಕ್ಕೆ ಬಲಿಮಾಡು ಆಗಲೇ ಅವ್ಯಯಾನಂದವೆನ್ನುವ ವರವನ್ನು ಆತ್ಮ ಪ್ರಸಾದಿಸುತ್ತದೆ.

76. ಆನಂದವೆಂಬ ಆಸೆ ತೋರಿಸಿ ಎಲ್ಲಾಕಷ್ಟಗಳು ಇಡುತ್ತಿರುವುದು ಮಾಯೆ, ಜೀವಿಗಳ ಮಾಯಾಸಮ್ಮೋಹದಿಂದ ಮಗ್ನಗೊಳಿಸಿ,

ಪಂಚಭೂತಗಳೆನ್ನುವ ಉಪಕರಣಗಳಿಂದ ಪರಮಾತ್ಮ ಕೊಡುತ್ತಿರುವ ಇಂದ್ರಜಾಲ ಪ್ರದರ್ಶನವೇ ಈಜಗತ್ ಕೃತ್ಯಗಳು.

77. ಕುತಂತ್ರಗಳಿಂದ ಬುದ್ಧಿ, ಆಲೋಚನೆಗಳಿಂದ ಮನಸ್ಸು, ನಿರ್ಣಯ ಗಳಿಂದ ಚಿತ್ತವು, ಜೀವಿಯನ್ನು ಕೀರ್ತಿಸುವುದರಲ್ಲಿ ಅಹಂ ನಿರಂತರವಾಗಿ ಇರುವವು.

78. ಉಪವಾಸಗಳು, ವ್ರತಗಳಿಂದ ಮೈ ಕೆಡುವುದೇ ಹೊರೆತು, ಜೀವಾ! ಅವು ನಿನ್ನನ್ನು ಉದ್ಧರಿಸಲಾರವು. ಯೋಗಗಳಿಂದ ಊಹಿಸಲಾರದ ಸ್ಥಿತಿಯನ್ನು ತಲುಪಬಲ್ಲೆ.

79. ಮಾಯೆಯನ್ನು ಜಯಿಸಿದವರೇ ಮಹನೀಯರು, ಆದರೆ ಮಾಯೆಯಿಂದ ಕೂಡಿಕೊಂಡ ಮಾತುಗಳು ಹೇಳುವವರಲ್ಲ.

80. ತಪಸ್ಸಿಗೂ ತಪನೆಗೂ ಕಾಲವ್ಯತ್ಯಾಸವೇ ಭೇಧ, ತಪಸ್ಸು ದೊಡ್ಡ ಕೋರಿಕೆ, ತಪನೆ ಚಿಕ್ಕ ಕೋರಿಕೆ.

81. ತಪನೆಗಳು, ತಪಸ್ಸುಗಳು ಬಿಟ್ಟಾಗಲೇ ತತ್ತ್ವವು ಗೋಚರಿಸುತ್ತದೆ.

82. ಮನಸ್ಸನ್ನು ಒಂದೇ ವಿಷಯದಮೇಲೆ ನಿಲ್ಲಿಸುವ ಅಭ್ಯಾಸ ಮಾಡಿದರೆ ನಂತರ ಅದು ಆ ವಿಷಯದಿಂದ ಮರಳಿ ಬರುವುದು ಮಹಾ ಕಷ್ಟವಾಗುವುದು.

83. ಮನಸ್ಸು ಎಂಬ ಗಿಡಕ್ಕೆ ವಿಷಯಗಳನ್ನುವ ಬೇರುಗಳು ಆಧಾರವು. ಬೇರುಗಳು ಕಡಿದರೆ ಗಿಡವು ಕುಸಿದು ಹೋಗುವ ಹಾಗೆ ವಿಷಯಗಳು ಖಂಡಿಸಿದರೆ ಮನಸ್ಸು ಕುಸಿದು ಹೋಗುವುದು.

84. ಒಂದು ಕೋರಿಕೆ ತೀರಿಸಿಕೊಳ್ಳುವಷ್ಟರಲ್ಲಿ ಹತ್ತು ಕೋರಿಕೆಗಳು ನಿನ್ನಲ್ಲಿ ಆವಿರ್ಭವಿಸುತ್ತಿದ್ದರೆ ಇನ್ನು ಕೋರಿಕೆಗಳು ಕಡಿಮೆಯಾಗುವುದುಯಾವಾಗ?

85. ಅಜ್ಞಾನಜೀವಿಗಳಿಗೆ ಆಯುಸ್ಸು ಪೂರ್ತಿಯಾಗುತ್ತಿದ್ದರೆ, ಆಸೆಗಳು ಬೆಳೆಯುತ್ತಾಹೋಗುತ್ತಿವೆ.

86. ಬಾಹ್ಯ ಸಂಸಾರವನ್ನು ತೊರೆದವನಿಗಿಂತಲೂ ಒಳಗಿನ ಸಾಂಗತ್ಯವನ್ನು ತೊರೆದವನೇ ನಿಜವಾದ ಸನ್ಯಾಸಿ.

87. ಯಾವಾಗ ಜ್ಞಾನ ತಿಳಿದುಕೊಳ್ಳಬೇಕೆಂದು ಸಂಕಲ್ಪ ಹುಟ್ಟುವುದೋ, ಆ ಕ್ಷಣದಲ್ಲಿಯೇ ಪ್ರಯತ್ನಿಸು. ಏಕೆಂದರೆ ಮನಸ್ಸು ಚಂಚಲವಾದದು. ಜೀವನವು ಅಸ್ಥಿರವಾದದು.

88. ಸಂಕಲ್ಪಗಳಿಲ್ಲದ ಜ್ಞಾಪಕವೇ ನಿನಗೂ ದೇವರಿಗೂ ಮಧ್ಯದಲ್ಲಿರುವ ಆತ್ಮವನ್ನು ಗ್ರಹಿಸುತ್ತದೆ.

89. ನಿನ್ನ ನೀನು ತಿಳಿದುಕೊಂಡಷ್ಟು ಮಾತ್ರಕ್ಕೆ ನಿನ್ನ ಹೊರಗಿರುವ ಪರಬ್ರಹ್ಮನನ್ನು ತಿಳಿಯಲಾರೆ. ಕರ್ಮ ತೀರಿಹೋಗಿ ನಿನ್ನ ಶರೀರವನ್ನು ಬಿಟ್ಟನಂತರವೇ ಪರಬ್ರಹ್ಮ ತಿಳಿಯುವನು.

90. ವಿಷಯಗಳೆನ್ನುವ ವಿಷ ವೃಕ್ಷಗಳಿಂದ ತುಂಬಿದ ಅಜ್ಞಾನ ಅರಣ್ಯದಲ್ಲಿ ಹಸಿವಿನಿಂದ ಬಳಲುತ್ತಿರುವ ಜೀವಾ! ಹಿಡಿದುಕೋ ಆಧ್ಯಾತ್ಮಿಕ ಆಯುಧವನ್ನು ತಳಸಮೇತ ಕೆಡವಿಹಾಕು ಆ ಅಜ್ಞಾನದ ಅರಣ್ಯವನ್ನು, ಆಗಲೇ ಅಖಂಡ ಪರಬ್ರಹ್ಮವೆನ್ನುವ ಬಯಲಲ್ಲಿ ಹಸಿವು ತೀರಿಸಿಕೊಳ್ಳುವೆ.

91. ನೀಚ ವಾಂಛಗಳಿಗೆ ನಿನ್ನಮನಸ್ಸಿನಲ್ಲಿ ಜಾಗಬಿಡಬೇಡ ಅವು ನಿನ್ನನ್ನು ಆತ್ಮಜ್ಞಾನಕ್ಕೆ ಅತಿದೂರ ಮಾಡುವುದು.

92. ಸೌಖ್ಯಗಳು ಪ್ರಸಾದಿಸುವ ಕರ್ಮಗಳು ತನ್ನ ಪ್ರಮೇಯವೆಂದು, ಬಾಧೆಗಳು ಪ್ರಸಾದಿಸುವ ಕರ್ಮಗಳು ದೈವಪ್ರಮೇಯವೆಂದು ಭಾವಿಸುವುದು ಅಜ್ಞಾನವಾಗುವುದು.

93. ನಿನ್ನ ದೇಹದಲ್ಲಿರುವ ಸರ್ವಾಂಗಗಳು ನನ್ನವು ಎನ್ನುತ್ತಿರುವೆ ನನ್ನವು ಎನ್ನುತ್ತಿರುವ ನೀನು ಯಾರೋ ತಿಳಿದುಕೊಳ್ಳದೇ ಹೋಗುತ್ತಿರುವೆ.

94. ಸಂಪತ್ತು ಇದ್ದಾಗ ದೇವರು ಕಾಣುವುದಿಲ್ಲ, ಬಡತನ ಬಂದಾಗ ಮಾತ್ರವೇ ಜ್ಞಾಪಕಕ್ಕೆ ಬರುತ್ತಾನೆ.

95. ಜಗವೆಲ್ಲಾ ತುಂಬಿದ ಜಗನ್ನಾಥನೇ ಭಗದಿಂದ ಉದ್ಭವಿಸಿ ಭಗವಂತನಾಗಿದ್ದಾನೆ. ಅವನೇ ರಾಯಭಾರಿ(ರಾಜಸಂದೇಶ), ಅವಧೂತ.

96. ಭಕ್ತರ ಹೃದಯಗಳಲ್ಲಿನ ಆತ್ಮಚಿಹ್ನೆಯೇ ಬಂಡೆಕಲ್ಲು ಗುಡಿಗಳಲ್ಲಿನ ಪ್ರತಿಮೆಯ ಆಕಾರವು.

97. ಅಷ್ಟಸಿದ್ಧಿಗಳನ್ನು ಅಭಿಲಾಷಿಸುವವರು ಅಚಲಸಿದ್ಧಿಯನ್ನು ಪಡೆಯಲು ಸಾಧ್ಯವಿಲ್ಲ.

98. ಮತಿಭ್ರಷ್ಟರನ್ನು ನೋಡಿ ಅವಧೂತರೆಂದು ಅಂದುಕೊಳ್ಳುವವರೇ ನಿಜವಾದ ಮತಿಭ್ರಷ್ಟರು.

99. ನದಿಪ್ರವಾಹವನ್ನು ದಾಟುವುದಕ್ಕೆ ಪ್ರತಿಷ್ಠಿತವಾದ ದೋಣಿ ಎಷ್ಟು ಅಗತ್ಯವೋ ಸಂಸಾರವೆನ್ನುವ ನದಿಯನ್ನು ದಾಟುವುದಕ್ಕೆ ಶುದ್ಧವಾದ ಜ್ಞಾನನೌಕೆ ಅಗತ್ಯ.

100. ಜ್ಞಾನವೆನ್ನುವ ಕಟ್ಟಿಗೆಯಿಂದ ನಿರ್ಮಿಸಲ್ಪಟ್ಟ ದೋಣಿಯಲ್ಲಿ ಜೀವಿಯನ್ನು ಸೇರಿಸಿ, ಸಂಸಾರವೆನ್ನುವ ಸಾಗರವನ್ನು ದಾಟಿಸಿ, ಮೋಕ್ಷವೆನ್ನುವ ತೀರವನ್ನು ಸೇರಿಸಬಲ್ಲ ನಾವಿಕನೇ ಸದ್ಗುರುವು.

101. ವಿಷಯ ಚಿಂತನೆಯೆನ್ನುವ ವಿಷ ಜಾಡ್ಯದಿಂದ ನರಳುವ ಜೀವಿಗೆ ವಿಮುಕ್ತಿ ನೀಡುವ ಶಕ್ತಿ ಒಂದೇ ಒಂದು ಔಷಧಕ್ಕಿರುವುದು ಆ ಔಷಧವೇ ಸದ್ಗುರು ಪ್ರಬೋಧಾಮೃತವು.

102. ಆಸೆ ಭೂತಗ್ರಸ್ತವಾಗಿ ಆತ್ಮಶಾಂತಿ ಇಲ್ಲದೆ ದುಃಖಿಸುತ್ತಿರುವ ಜೀವಾ! ಅದು ಬಿಡಬೇಕೆಂದರೆ ಗುರು ಪ್ರಬೋಧನ ಮಂತ್ರವೆ ನಿನಗೆ ಶರಣ್ಯವು.

103. ಸಂಶಯ ರಾಹಿತ್ಯವೇ ಸಂಪೂರ್ಣ ಜ್ಞಾನವು.

104. ಇತ್ತ ಪ್ರಕೃತಿ, ಅತ್ತ ಆತ್ಮ ಎರಡರಲ್ಲಿಯೂ ಸಂಬಂಧವಿಲ್ಲದ ಜೀವಾತ್ಮ ಪರಮಾತ್ಮನಾಗಿ ಬದಲಾಗಬಲ್ಲನು.

105. ಶರೀರವೆಂಬ ದೀಪದಲ್ಲಿ ಕರ್ಮವೆಂಬ ಎಣ್ಣೆಹಾಕಿ ಅದರಲ್ಲಿ ಬತ್ತಿಯೆನ್ನುವ ಎಚ್ಚರಿಕೆಯಿಂದ ಜ್ಞಾನವೆಂಬ ಜ್ಯೋತಿಯನ್ನು ಬೆಳಗಿಸಿ ಆ ಬೆಳಕಿನಲ್ಲಿ ಆತ್ಮವನ್ನು ದರ್ಶಿಸುವುದೇ ನಿಜವಾದ ದೀಪಾರಾಧನೆಯ ಅರ್ಥವು.

106. ಜೀವಿಯು ಕರ್ಮವನ್ನು ಅನುಭವಿಸುವುದಕ್ಕೆ ಕಾಲವೇ ಆಧಾರವು.

107. ಎಲ್ಲಾ ಸಮಸ್ಯೆಗಳನ್ನು ಕಾಲವೇ ಪರಿಷ್ಕರಿಸುತ್ತದೆ. ಆ ಕಾಲವು ಬರುವವರೆಗೆ ಜೀವಿಗಳು ಕಾದು ಇರಬೇಕಾಗಿರುವುದೇ.

108. ಸ್ತ್ರೀಯರ ಯವ್ವನಸೌಂದರ್ಯಕ್ಕೆ ಚಿತ್ತಚಾಂಚಲ್ಯತೆಯು ಹೊಂದಿದ ಜೀವಿಗಳು ಆ ಶರೀರಗಳಲ್ಲಿನ ಚೈತನ್ಯಶಕ್ತಿಯೇ ಆ ಸೌಂದರ್ಯವೆಂದು ಅರ್ಥ ಮಾಡಿಕೊಳ್ಳಲಾಗಿದ್ದಾರೆ.

109. ಅನಿತ್ಯವಾದ ಶರೀರಗಳನ್ನು ಪ್ರೇಮಿಸಿ ಆನಂದಿಸುತ್ತಿರುವ ಜೀವಿಗಳು ಅದು ನಾಶವಾದಾಗ ವೇದನೆ ಹೊಂದುತ್ತಾರೆ. ಆ ಶರೀರಗಳಿಗೆ ಆಧಾರವಾದ ಆತ್ಮ ನಿತ್ಯವಾದದು ಅದನ್ನು ಗುರುತಿಸಿದರೇ ಅಸಲು ದುಃಖವೇ ಇರುವುದಿಲ್ಲ!

110. ಸೂರ್ಯನನ್ನು ಮೇಘವು ಮುಚ್ಚಿದಹಾಗೆ ಜ್ಞಾನವನ್ನು ಕಾಮ(ಆಸೆ)ವು ಮುಚ್ಚಿಹಾಕಿದೆ. ವಾಯು ತರಂಗಗಳ ರಭಸಕ್ಕೆ ಮೇಘವು ಚದುರಿಹೋದಾಗ ಸೂರ್ಯ ಪ್ರಕಾಶವು ಗೋಚರಿಸಿದಹಾಗೆ, ಪ್ರಬೋಧ ತರಂಗಗಳ ರಭಸಕ್ಕೆ ಕಾಮವು ಚದುರಿಹೋದಾಗಲೇ ಜ್ಞಾನವು ಪ್ರಕಾಶಿಸುತ್ತದೆ.

111. ನಿನ್ನಲ್ಲಿ ಜ್ಞಾನವು ನಿನಗೆ ತಿಳಿಸುವ ನಿಮಿತ್ತವೇ ಗುರುವು ನಿನ್ನನ್ನು ಪರೀಕ್ಷಿಸುತ್ತಾನೆ.

112. ಕಾಲವು ತೀರಿದಾಗ ಕಾಯವು, ಕರ್ಮ ತೀರಿದಾಗ ಜೀವವು ಕೊನೆಗಾಣುತ್ತಿರುವುದು.

113. ಪಾದರಕ್ಷೆಗಳು ಧರಿಸಿದವರು ಮುಳ್ಳಿನಾವರಣದ ಮಾರ್ಗದಲ್ಲಿ ನಿರ್ಭಯವಾಗಿ ಹೇಗೆ ನಡೆಯಬಲ್ಲರೋ, ಅದೇ ವಿಧವಾಗಿ ಜ್ಞಾನ ರಕ್ಷೆಗಳು ಧರಿಸಿದವರು ಸಂಕಟದಾವರಣವಾದ ಸಂಸಾರ ಮಾರ್ಗವನ್ನು ಧೈರ್ಯವಾಗಿ ಸಾಗಿಹೋಗಬಲ್ಲರು.

114. ಜ್ಞಾನವೆನ್ನುವ ಕವಚವನ್ನು ಧರಿಸಿದ ಜೀವಿಗೆ ಅರಿಷಡ್ವರ್ಗಗಳು ಹಾಕುವ ವಿಷಯಗಳೆನ್ನುವ ವಿಷಬಾಣಗಳು ತಗುಲಿದ್ದರೂ ಅವು ಏನು ಮಾಡಲಾರವು.

115. ವಿಷಯ ಚಿಂತನೆಯನ್ನು ಬಿಟ್ಟು ಪರಮಾರ್ಥ ಚಿಂತನೆಯು ಪಟ್ಟುಹಿಡಿದ ದಿನವೇ ಮಾನವನು ತನ್ನ ಸ್ವಚ್ಛವಾದ ಜೀವನವನ್ನು ಸಾಗಿಸಬಲ್ಲನು.

116. ನಿನ್ನನ್ನು ನೀನು ತಿಳಿದುಕೊಂಡರೇ ನಿನ್ನಲ್ಲಿನ ಅಹಂ ಏನೆಂದು ತಿಳಿಯುವುದು.

117. ಒಳ್ಳೆಯದನ್ನು ಆಲೋಚಿಸಿದರೂ, ಕೆಟ್ಟದ್ದನ್ನು ಆಲೋಚಿಸಿದರು ಏನು ನಡೆಯಬೇಕೋ ಅದೇ ನಡೆದು ಹೋಗುತ್ತದೆ.

118. ಭೋಗಗಳೆಲ್ಲವನ್ನು ಅನುಭವಿಸಿದ ನಂತರ ಯೋಗಸಿದ್ಧಿ ಪಡೆಯಬಹುದೆಂದು ಯೋಚಿಸಬೇಡ, ಆಗ ರೋಗಸಿದ್ಧಿ ಉಂಟಾಗಬಹುದು.

119. ಪ್ರತೀ ಜೀವಿಗೂ ಭಕ್ತಿ ಇರುತ್ತದೆ. ಅದು ಪ್ರಕೃತಿ ಭಕ್ತಿಯಲ್ಲದೆ ಪರಮಾತ್ಮ ಭಕ್ತಿ ಆದರೇನೆ ಒಳ್ಳೆಯದು.

120. ಕಾಮ್ಯಾರ್ಥ ಪೂಜೆಗಳಿಗೆ ಕಾರಣವು ದೇವಾಲಯಗಳಲ್ಲ. ಆತ್ಮಾರ್ಥ ಮರೆಮಾಚುವುದಕ್ಕೆ ಆರ್ಯರು ದೇವಾಲಯಗಳನ್ನು ನಿರ್ಮಿಸಿದ್ದಾರೆ.

121. ಸುಜ್ಞಾನವು ಇಲ್ಲದ ನರನ ಬದುಕು, ಸುಗಂಧವಿಲ್ಲದ ಪುಷ್ಪದೊಂದು ಅಂದವು ಪ್ರಯೋಜನವಿಲ್ಲ.

122. ತಲೆಯಲ್ಲಿನ ಪರ್ಯಾಲೋಚನೆಗಳನ್ನು ದೈವಕ್ಕೆ ಅರ್ಪಿಸಿದರೆ ಕರ್ಮ ತೊಲಗುತ್ತದೆ ಹೊರೆತು ತಲೆಕೂದಲನ್ನು ಅರ್ಪಿಸಿದರೆ ತೊಲಗುವುದಾ?

123. ಕರ್ಪೂರವು ಅಗ್ನಿಯಿಂದ ಸುಟ್ಟು ನಿಶ್ಶೇಷವಾದ ನಂತರ ಕರ್ಪೂರವು ಮತ್ತು ಅಗ್ನಿ ಇಲ್ಲದೇ ಶೂನ್ಯದಲ್ಲಿ ಹೇಗೆ ನಾಶವಾಗುವುದೋ, ಹಾಗೆಯೇ ಜ್ಞಾನವೆನ್ನುವ ಅಗ್ನಿಯಿಂದ ಸುಡಲಾಗುತ್ತಿರುವ ಕರ್ಮ ನಿಶ್ಶೇಷವಾದ ನಂತರ ಸುಡುತ್ತಿರುವ ಕರ್ಮ ಮತ್ತು ಸುಟ್ಟುಹಾಕುತ್ತಿರುವ ಜ್ಞಾನವು ಎರಡು ಪರಮಾತ್ಮನಲ್ಲಿ ಐಕ್ಯವಾಗಿಹೋಗುತ್ತಿರುವುದು.

124. ಆತ್ಮಸ್ಥಿತಿ ತಲುಪುವವರೆಗೂ ಅನುಕ್ಷಣವೂ ಬಳಲುತ್ತಿರು ಅದೇ ನಿನ್ನ ಜೀವನ ಲಕ್ಷ್ಯವು.

125. ವಿಭಿನ್ನ ರೂಪಗಳುಳ್ಳ ಪ್ರಕೃತಿ ಒಂದರ ಪಂಚಭಾಗಗಳಲ್ಲಿ ಏಕತ್ವವಾಗಿ ಕೂಡಿರುವ ಪರಮಾತ್ಮನನ್ನು ಅರ್ಥಮಾಡಿಕೋ, ಆಗಲೇ ನಿನ್ನ ಅಂತರಂಗದಲ್ಲಿನ ಅಜ್ಞಾನವು ನಿನಗೆಟುಕದಷ್ಟು ದೂರವಾಗಿ ಓಡಿಹೋಗುತ್ತದೆ.

126. ನಿನ್ನ ಶರೀರವು ಸ್ತ್ರಿ, ಅದರಲ್ಲಿರುವ ನೀನು ಪುರುಷನು, ನಿಮ್ಮಿಬ್ಬರ ಮಿಲನದಿಂದ ನಿನ್ನ ಶರೀರವು ಚೈತನ್ಯವಂತವಾಗುತ್ತಿದೆ.

127. ಅನುಭವವಿಲ್ಲದ ಆತ್ಮಬೋಧನೆ, ಆಕರ್ಷಣೆಯಿಲ್ಲದ ಅಂದದ ಹಾಗೆ.

128. ನರಕ, ಸ್ವರ್ಗಲೋಕಗಳೆಲ್ಲಾ ನರಲೋಕದಲ್ಲಿಯೇ ಇರುವವು. ಯಾವ ಸ್ಥಳದಲ್ಲಿ ಜೀವಿಯು ಕಷ್ಟವನ್ನು ಅನುಭವಿಸುತ್ತಿದ್ದಾನೋ ಆ ಪ್ರದೇಶವೇ ಅವನ ಪಾಲಿಗೆ ನರಕಲೋಕವು. ಯಾವಸ್ಥಳದಲ್ಲಿ ಜೀವಿಯು ಸೌಖ್ಯವನ್ನು ಅನುಭವಿಸುತ್ತಿದ್ದಾನೋ ಆಸ್ಥಳವೇ ಅವನ ಪಾಲಿಗೆ ಸ್ವರ್ಗಧಾಮವು.

129. ಕರ್ಮತೊರೆದವನೇ ನಿಜವಾದ ಸ್ವತಂತ್ರನು.

130. ಆತ್ಮಜ್ಞಾನಕ್ಕೆ ಉಪಯೋಗಿಸದ ಐಶ್ವರ್ಯವು, ಅಂಗಬಲವು, ಆಯಸ್ಸು ಊರಲ್ಲಿ ಪ್ರಕಾಶಿಸಿದ ಬೆಳದಿಂಗಳಿನಂತೆ ವ್ಯರ್ಥವಾಗಿರುವುದು.

131. ಮೊದಲು ಅಮೃತದಂತಿದ್ದು ಕೊನೆಗೆ ವಿಷವಾಗಿ ಪರಿಗಣಿಸುವವೇ

ಪ್ರಪಂಚ ವಿಷಯಗಳು. ಮೊದಲು ವಿಷವಾಗಿದ್ದು, ಕೊನೆಗೆ ಅಮೃದಹಾಗೆ ಇರುವವೇ ಜ್ಞಾನ ವಿಷಯಗಳು.

132. ಸೂರ್ಯೋದಯವು ಕೂಡ ಕಳೆಯಲಾರದ ಕತ್ತಲು ಒಂದಿದೆ ಅದೇ ಅಜ್ಞಾನವು. ಅದು ಜ್ಞಾನೋದಯದಿಂದಲೇ ಹೋಗುವುದು.

133. ಜ್ಞಾನವು ತಿಳಿಯದ ಸಾಧನೆ ದಾರಿ ತಿಳಿಯದ ನಡಿಗೆಯಂತದು.

134. ಹೆಂಡತಿ ಮೋಹ ಎನ್ನುವ ಬೇಡಿಗಳು ತಗುಲಿಸಿ, ಪುತ್ರವ್ಯಾಮೋಹವೆನ್ನುವ ಕಡಾಣಿಬಿಗಿಸಿ, ಪ್ರಕೃತಿಯೆಂಬ ಸೆರೆಮನೆಯಲ್ಲಿ ಜೀವಿಯನ್ನು ಬಂಧಿಸಿ ಕರ್ಮವೆನ್ನುವ ಶಿಕ್ಷೆಯನ್ನು ಅನುಭವಿಸುವಂತೆ ಮಾಡುತ್ತಿರುವುದು ಮಾಯೆ.

135. ಮನಸ್ಸು ಎಲ್ಲಿದೆಯೋ ಗೊತ್ತಾ? ಅದು ನಿನ್ನಹಾಗೆ ಶರೀರದಲ್ಲಿ ಒಂದುಕಡೆ ಇಲ್ಲ. ಎಚ್ಚರಿಕೆಯಲ್ಲಿ ಶರೀರವೆಲ್ಲಾ ವ್ಯಾಪಿಸಿರುವುದು.

136. ಕರ್ಮಗಳನ್ನು ಆಧಾರವಾಗಿ ಮಾಡಿಸುವುದು ಆತ್ಮ, ಮಾಡುವುದು ಕಾಯವು (ಶರೀರವು), ಅನುಭವಿಸುವುದು ಜೀವಿಯು.

137. ಪ್ರಪಂಚದಲ್ಲಿನ ಪ್ರತೀ ಮನುಷ್ಯ ಸುಖವು ಉಂಟಾಗುತ್ತದೆಂಬ ಆಸೆಯಿಂದಲೇ ಕಷ್ಟಗಳ ಪೂಜೆಗಳನ್ನು ಮಾಡುತ್ತಿರುವನು.

138. ಮಾಯೆ ಎಂಬ ಕನ್ನಡಿಯಲ್ಲಿ ಪ್ರತಿಬಿಂಬಿಸುತ್ತಿರುವ ಜೀವಾತ್ಮಗಳ ಒಂದು ಸಾವುಹುಟ್ಟುಗಳ ಸ್ವರೂಪವೇ ಈ ಜಗತ್ತು.

139. ಬಲವಾದ ಪ್ರಕೃತಿ ಶಕ್ತಿಗಳನ್ನು ತನ್ನ ವಶಮಾಡಿಕೊಂಡು ಪರವಶಿಸಬೇಕೆಂದು ಉತ್ಸಾಹದಿಂದ ಬೀಗುತ್ತಿರುವ ಮಾನವನು ಕೊನೆಗೆ ಆ ಪ್ರಕೃತಿ ಶಕ್ತಿಗಳಿಂದಲೇ ಭಂಗಪಡದೇ ತಪ್ಪದು.

140. ಯಾವ ಆಧಾರದಿಂದ ಎಲ್ಲಾ ನನ್ನದೆಂದುಕೊಳ್ಳುತ್ತಿರುವೆಯೋ ಆ ಜ್ಞಾಪಕವನ್ನು ಅರ್ಧ ಕ್ಷಣದಲ್ಲಿ ಅಂತ್ಯವು ಮಾಡಬಲ್ಲ ಅಜ್ಞಾತಶಕ್ತಿ ಒಂದಿದೆ. ಅದೇ ನಿನ್ನ ಮೃತ್ಯುವು.

141. ನಾನು ಅಂದುಕೊಂಡರೆ ನೀನು ನೀನಾಗಿಯೇ ಇರುವೆ. ನಾನು ಅಂದುಕೊಂಡರೆ ನೀನು ಎಲ್ಲಾಕಡೆ ಇರುವೆ ಎನ್ನುವನು ಪರಮಾತ್ಮ.

142. ಅಜ್ಞಾನಿಗಳು ಸಂಸಾರಕ್ಕಾಗಿಯೇ ಕರ್ಮ ಮಾಡುತ್ತಾರೆ. ಜ್ಞಾನಿಗಳು ಕರ್ಮಕ್ಕಾಗಿಯೇ ಸಂಸಾರವನ್ನು ಮಾಡುತ್ತಾರೆ.

143. ಜನ್ಮ ಜನ್ಮಕ್ಕೂ ತನುವು ಬೇರೆ. ತನುವು ತನುವಿಗೂ ಕರ್ಮ ಬೇರೆ, ಕರ್ಮ ಕರ್ಮಕ್ಕೂ ಮನಸ್ಸು ಬೇರೆ. ಮನಸ್ಸು ಮನಸ್ಸಿಗೂ ಬುದ್ಧಿ ಬೇರೆ.

144. ಜ್ಞಾನವು, ಅಜ್ಞಾನವು ಎರಡು, ನಿನ್ನಲ್ಲಿಯೇ ಇರುವವು. ಆದರೆ ಅಜ್ಞಾನದ ಚೀಲದಲ್ಲಿ ಜ್ಞಾನದ ಮೂಟೆ ಕಟ್ಟಿಹಾಕಿದೆ.

145. ದೈವ ಸೇವೆಗಾಗಿ ನಾವಿರಬೇಕೇ ಹೊರತು ನಮ್ಮ ಪ್ರಯೋಜನಕ್ಕಾಗಿ ದೈವವಿರಬಾರದು.

146. ಫಲವನ್ನಾಶಿಸುವ ಕಾರ್ಯವು ಬಂಧವನ್ನು ಉಂಟುಮಾಡುತ್ತದೆ. ಫಲವನ್ನಾಶಿಸದ ಕಾರ್ಯವು ಮುಕ್ತಿಯನ್ನು ಉಂಟುಮಾಡುತ್ತದೆ.

147. ತಾಯಿ ಗರ್ಭದಿಂದ ತನುವು, ಬ್ರಹ್ಮ ಗರ್ಭದಿಂದ ಪ್ರಕೃತಿ ಉದ್ಭವಿಸಿರುವವು.

148. ಪ್ರಕೃತಿ ಸಂಬಂಧವಾದ ಪ್ರತೀ ಶರೀರದಲ್ಲಿಯೂ, ಪರಮಾತ್ಮ ಸಂಬಂಧವಾದ ಪುರುಷರಿಬ್ಬರು ಇರುತ್ತಾರೆ. ಅವರೇ ಕ್ಷರಾಕ್ಷರರು.

149. ಸ್ತ್ರೀ ಪುರುಷ ಸಂಯೋಗ ಫಲವು ದೇಹಕಾರಣವು. ಪಾಪ ಪುಣ್ಯ ಸಂಯೋಗ ಫಲವು ಜೀವಕಾರಣವು.

150. ನೀನು ನಿನ್ನ ಕರ್ಮವನ್ನನುಭವಿಸುವುದಕ್ಕಾಗಿಯೇ ನಿನ್ನ ಶರೀರವು ಹುಟ್ಟಿದೆ ಆದರೆ ನಿನ್ನ ಶರೀರದ ಕರ್ಮ ಅನುಭವಿಸುವುದಕ್ಕಾಗಿ ನೀನು ಹುಟ್ಟಲಿಲ್ಲ.

151. ಕರ್ಮ ಎಂದರೆ ಏನೋ ತಿಳಿದುಕೊಂಡರೆ ಕರ್ಮದಿಂದ ವಿಮುಕ್ತನು

ಆಗಬಹುದು. ಮನಸ್ಸೆಂದರೆ ಏನೋ ತಿಳಿದುಕೊಂಡರೇ ಮನಸ್ಸನ್ನು ಜಯಿಸಬಹುದು. ಆತ್ಮ ಅಂದರೆ ಏನೋ ತಿಳಿದುಕೊಂಡರೆ ಆತ್ಮವನ್ನು ಸೇರಬಹುದು.

152. ಎಲ್ಲಾ ಕೆಲಸಗಳು ನಿನ್ನ ಇಷ್ಟ ಪ್ರಕಾರವಾಗಿ ನಡೆಯುತ್ತಿವೆಯೆಂದು ತಿಳಿಯುತ್ತಿರುವೆ. ನಿಜವೇ ಆದರು ನಿನ್ನ ಇಷ್ಟ ಕರ್ಮ ಪ್ರಕಾರ ನಡೆಯುತ್ತಿರುವುದು.

153. ಆತ್ಮಜ್ಞಾನ ಗ್ರಹಿಸದೆ ಹೋಗುವುದೇ ಜೀವಿಗಳಿಗೆ ನಿಜವಾದ ಶಿಕ್ಷೆ.

154. ಆತ್ಮಜ್ಞಾನವೇ ಕರ್ಮವೆನ್ನುವ ಸಮಿಧಿ (ಕಟ್ಟಿಗೆ) ಗಳನ್ನು ಸುಡುವ ಅಗ್ನಿ, ಆತ್ಮ ಜ್ಞಾನವೇ ಕರ್ಮ ಜಾಡ್ಯವನ್ನು ತೀರಿಸುವ ಅಮೋಘ ಔಷಧವು, ಆತ್ಮ ಜ್ಞಾನವೇ ಕರ್ಮ ಮಾಲಿನ್ಯವನ್ನು ತೊಳೆಯುವ ಪರಿಶುದ್ಧ ಜಲವು.

155. ಮಧುರವಾದ ವಿಷ ಫಲಗಳಂತವು ವಿಷಯ ಸುಖಗಳು, ಅವು ಅನುಭವಿಸುತ್ತಿದ್ದಾಗ ಅತಿ ಮಧುರವಾಗಿದ್ದರೂ ಆನಂತರ ಅತಿದಾರುಣ (ಅತ್ಯಂತ ಭೀತಿ) ಫಲಿತಗಳನ್ನು ಕಲ್ಪಿಸುತ್ತವೆ.

156. ಪುಣ್ಯಕ್ಕಾಗಿ ದಾನವು ಮಾಡಿದರೆ ಸುಖಕ್ಕಾಗಿ ಜನ್ಮ ಬರುವುದು.

157. ನೀನು ಮಾಡುವ ದಾನವು, ಯಜ್ಞವು, ವೇದಪಠಣವು, ತಪಸ್ಸು ಎನ್ನುವ ನಾಲ್ಕು ವಿಧಾನಗಳಿಂದ ದೇವರನ್ನು ತಿಳಿಯುವುದಕ್ಕೆ ಸಾಧ್ಯವಾಗದೆಂದು ಭಗವದ್ಗೀತೆಯಲ್ಲಿ ಭಗವಂತನು, ಮತ್ತು ಪರಮಾತ್ಮ ತಿಳಿಸಿದ್ದಾನೆ.

158. ಇಂದ್ರಿಯಾಗೋಚರನನ್ನು ಇಂದ್ರಿಯಾತೀತನಾಗಿ ಗುರುತಿಸಬೇಕು.

159. ಜ್ಞಾನವು ತಿಳಿಯುತ್ತಾ ಹೋದಂತೆಲ್ಲಾ ನಮ್ಮಲ್ಲಿರುವ ಅಜ್ಞಾನವು ಎಂತಹದೋ ತಿಳಿಯುವುದು.

160. ಮನುಷ್ಯನಿಗೆ ಗೃಹವಿದ್ದ ಹಾಗೆಯೇ ಜೀವಿಗೆ ಶರೀರವು.

161. ಮೊಗ್ಗು ಕಾಯಾಗಿ, ಹಣ್ಣಾಗಿ ಬದಲಾವಣೆ ಹೊಂದಿದ ಹಾಗೆ ನಿನ್ನ ಶರೀರವೂ ಕೂಡಾ ಯವ್ವನ, ಕೌಮಾರ್ಯ, ವೃದ್ಧಾಪ್ಯಗಳಲ್ಲಿ ಬದಲಾವಣೆ ಹೊಂದುತ್ತಿರುವುದು.

162. ಗಿಡದ ಎಲೆ ಬಣ್ಣ ಬದಲಾಗಿ ಹೋದಹಾಗೆ ನಿನ್ನ ಶರೀರವು ಕೂಡ ವೃದ್ಧಾಪ್ಯದಲ್ಲಿ ಬಣ್ಣ ಬದಲಾಗುತ್ತಿದೆ.

163. ನೀನು ಎಚ್ಚರಿಕೆ, ಸ್ವಪ್ನ, ನಿದ್ದೆಯೆಂಬ ಮೂರು ಅವಸ್ಥೆಗಳಲ್ಲಿ ಖೈದಿಯಾಗಿ ಇರುವೆ.

164. ನೀನು ಸ್ಥೂಲ, ಸೂಕ್ಷ್ಮ, ಕಾರಣವೆನ್ನುವ ಮೂರು ವಸ್ತ್ರಗಳ ಮಧ್ಯೆ ಸುತ್ತಿಡಲ್ಪಟ್ಟಿರುವೆ.

165. ಆತ್ಮ ಯೋಗಸಾಧನೆಗೆ ಹೊರೆತು ಉಳಿದ ವ್ರತ ಯಜ್ಞಗಳಿಗೆ, ತಪಸ್ಸುಗಳಿಗೆ, ವೇದಪಾರಾಯಣಗಳಿಗೆ ಮತ್ತು ಯಾವ ಇತರ ಆಚರಣೆಗೂ ತಿಳಿಯದು.

166. ಆತ್ಮವನ್ನು ತಿಳಿದುಕೊಂಡಷ್ಟು ಮಾತ್ರಕ್ಕೇ ಮುಕ್ತಿ ಇಲ್ಲ. ಕರ್ಮನಾಶನವು ಆದಾಗಲೇ ಮುಕ್ತಿ.

167. ಅಹಂ ಒಂದೆಯೇ ಕರ್ಮ ರಹಿತಕ್ಕೂ, ಕರ್ಮ ಸಹಿತಕ್ಕೂ ಕಾರಣವು.

168. ಮನಸ್ಸೊಂದೆಯೇ ಗುಣ ರಹಿತಕ್ಕೂ ಗುಣಸಹಿತಕ್ಕೂ ಕಾರಣವು.

169. ಭಗವಂತನು ಸಾಕಾರನು, ಪರಮಾತ್ಮನು ನಿರಾಕಾರನು.

170. ಪ್ರತೀ ಕಾರ್ಯವು ಗುಣದಿಂದ, ಪ್ರತೀ ಗುಣವು ಕರ್ಮದಿಂದ, ಪ್ರತೀ ಕರ್ಮ ಕಾರ್ಯದಿಂದ ಉಂಟಾಗುತ್ತಿರುವುದು. ಆದ್ದರಿಂದ ಜೀವಿಯು ಸಾವು ಹುಟ್ಟುಗಳೆನ್ನುವ ಚಕ್ರದಲ್ಲಿ ತಿರುಗುತ್ತಿರುವನು.

171. ಜ್ಞಾನೇಂದ್ರಿಯ ವಿಷಯಗಳ ಜ್ಞಾಪಕವೇ ನಿನ್ನಲ್ಲಿನ ಮನಸ್ಸು.

172. ಶರೀರದೊಳಗೆ ಜೀವಾತ್ಮ ಹೇಗೆ ಬರುವುದು ತಿಳಿಯದವರಿಗೆ ಶರೀರದೊಳಗಿಂದ ಜೀವವು ಹೇಗೆ ಹೋಗುವುದು ಕೂಡ ತಿಳಿಯದು.

173. ಶರೀರದಲ್ಲಿ ಇದ್ದಷ್ಟು ಕಾಲವು ಎಂತಹ ಯೋಗಿಯಾದರೂ ಪರಮಾತ್ಮನನ್ನು ತಿಳಿಯಲಾರನು.

174. ಪ್ರಕೃತಿ ಕಾರ್ಯಗಳು ಸ್ವಧರ್ಮವೆಂದು ತಿಳಿಯಬೇಡ, ಆತ್ಮ ಕಾರ್ಯಗಳೇ ಸ್ವಧರ್ಮವೆಂದು ತಿಳಿದುಕೋ.

175. ಪಾಪಗಳಲ್ಲಿ ಕ್ಷಮಿಸಲ್ಪಡುವ ಪಾಪವು, ಕ್ಷಮಿಸಲಾಗದ ಪಾಪವು ಎಂದು ಎರಡು ವಿಧಗಳಿರುವವು.

176. ಲಿಂಗವೊಂದೇ ಆದರೂ ಅದು ಮೂರು ವಿಧಗಳು. ಅಂಗವೊಂದೇ ಆದರೂ ಅದು ಐದು ವಿಧಗಳು.

177. ತಂದೆ ಶರೀರಕ್ಕೆ ಹುಟ್ಟುವವರು ಪುತ್ರರು. ಗುರುವು ಜ್ಞಾನದಿಂದ ತಯಾರಾಗುವವರು ಜ್ಞಾನಪುತ್ರರು.

178. ಆದ ಕೆಲಸಗಳಿಗೆ ನಾನು, ಆಗದ ಕೆಲಸಗಳಿಗೆ ಕರ್ಮ ಅನಬೇಡ. ಎಲ್ಲಾದಕ್ಕು ಕರ್ಮವೇ ಕಾರಣವು.

179. ಧರ್ಮಾರ್ಥ ಕರ್ಮಮೋಕ್ಷಗಳೆನ್ನುವುದು ಅಸತ್ಯವು. ಕಾಮ್ಯಾರ್ಥ ಧರ್ಮಮೋಕ್ಷಗಳೆನ್ನುವುದು ಸತ್ಯವು. ಧರ್ಮದಿಂದ ಹಣವು, ಕಾಮ (ಆಸೆ) ದಿಂದ ಮೋಕ್ಷವು ಬರುವುದು ಅಸತ್ಯವು.

180. ಧರ್ಮದಿಂದ ಮೋಕ್ಷವು, ಕಾಮದಿಂದ ಧನವು ಲಭ್ಯವಾಗುವುದು.

181. ನಿನ್ನ ಶರೀರದಲ್ಲಿ ಪ್ರತೀ ಕದಲಿಕೆ ಆತ್ಮದಾದರೂ ಅದು ಕರ್ಮನನುಸರಿಸಿಯೇ ಇರುವುದು.

182. ಆತ್ಮ ಹೊರಗೆ ಇಲ್ಲ. ಶರೀರದಲ್ಲಿ ಇದೆಯೆಂದು ಗ್ರಹಿಸು.

183. ಮರಣಿಸದ ಶರೀರದಿಂದ ಆತ್ಮ, ಜೀವಾತ್ಮ ಹೋದಾಗ, ಆ ಶರೀರದಲ್ಲಿ ಉಳಿದಿರುವುದು ಪರಮಾತ್ಮನು ಮಾತ್ರವೇ ಎಂದು ಗ್ರಹಿಸು.

184. "ಧನಮೂಲ ಮಿದಮ್ ಜಗತ್" ಎನ್ನುವರು. ಆ ಧನಕ್ಕೂ ಕೂಡ ಕಾರಣವು ಕರ್ಮವೇ ಆದ್ದರಿಂದ "ಕರ್ಮಮೂಲ ಮಿದಮ್ ಜಗತ್" ಎನ್ನುವ ಮಾತು ಸತ್ಯವಾದದ್ದು ಮತ್ತು ಸರಿಯಾದದ್ದು.

185. ಮಗುವಿಗೆ ತಂದೆ ಯಾರೋ ತಾಯಿಗೆ ತಿಳಿದಹಾಗೆ, ಜೀವಿಗೆ ದೇವರುಯಾರೋ ಗುರುವಿಗೆ ಮಾತ್ರ ತಿಳಿಯುವುದು.

186. ಆಹಾರದಿಂದ ಶರೀರಾರೋಗ್ಯವು, ವಿಷಯ ಆಹಾರದಿಂದ ಮನದ ಆರೋಗ್ಯವು ಇರುತ್ತದೆ.

187. ಆಹಾರವು ಗುಣಗಳಿಗೆ ಕಾರಣವಲ್ಲ. ಗುಣಗಳೇ ಆಹಾರಕ್ಕೆ ಕಾರಣವೆಂದು ತಿಳಿದುಕೋ.

188. ಅಜ್ಞಾನದಿಂದ ಲೋಕಗಳೆಲ್ಲೋ ಇರುವವೆಂದು ಭಾವಿಸಬೇಡ. ಎಲ್ಲಾ ಲೋಕಗಳು ನಿನ್ನ ತಲೆಯಲ್ಲಿಯೇ ಇರುವವು.

189. ಹುತ್ತವನ್ನು ನೋಡಿದಷ್ಟು ಮಾತ್ರಕ್ಕೆ ಹುತ್ತದಲ್ಲಿನ ಹಾವನ್ನು ಗುರುತಿಸಲಾರರು. ಹಾಗೆಯೇ ಶರೀರವನ್ನು ನೋಡಿದಷ್ಟು ಮಾತ್ರಕ್ಕೆ ಶರಿರದಲ್ಲಿನ ಜೀವಾತ್ಮನನ್ನು ಗುರುತಿಸಲಾರರು.

190. ಪ್ರಣತಿಯಲ್ಲಿ ಹರಳೆಣ್ಣೆ ಮುಗಿಯುತ್ತಲೆ ದೀಪವು ನಂದಿ ಹೋದ ಹಾಗೆ ಶರಿರದಲ್ಲಿ ಕರ್ಮ ಮುಗಿಯುತ್ತಲೆ ಜೀವಾತ್ಮ ಇಲ್ಲದಂತೆ ಹೋಗುವುದು.

191. ಜೀವಿಗೆ ಸಂಕಲ್ಪ ವಿಕಲ್ಪಗಳು ಕಲ್ಪಿಸಿ, ಅದರ ಯೋಚನೆಗಳ ಪ್ರಕಾರವು ಕೆಲಸಮಾಡಿಸಿ, ಆಗನಿಂದಾಗಲೇ ಸುಖದುಃಖ ಭಾವಗಳಿಗೆ ಗುರಿಮಾಡುತ್ತಿರುವುದೇ ಪ್ರಾರಬ್ಧಕರ್ಮವು.

192. ನೀನೆಷ್ಟು ತಾಪತ್ರಯಪಟ್ಟರೂ ನಿನ್ನ ಕರ್ಮಕ್ಕೆ ಮಿಂಚಿದ ಫಲವು ಉಂಟಾಗುವುದಿಲ್ಲ.

193. ಜೀವಿಗಳ ಕರ್ಮ ತೀರಬೇಕಾದರೆ ಎರಡೇ ಎರಡು ಮಾರ್ಗಗಳು ಇರುವವು. ಅನುಭವಿಸುವುದೊ ಅಥವಾ ಜ್ಞಾನಾಗ್ನಿಗೆ ಆಹುತಿ ಮಾಡುವುದೊ.

194. ನಿನಗಿಂತಲೂ ಬೇರೆಯಾಗಿರುವ ಪ್ರಕೃತಿಯೇ ನಿನ್ನ ಶರೀರವು.

195. ನಿನಗಿಂತಲೂ ಬೇರೆಯಾಗಿರುವ ಪ್ರಕೃತಿಯನ್ನು (ಶರೀರವನ್ನು) ನೀನೆಂದು ಭಾವಿಸುತ್ತಿರುವವರೆಗೂ ನಿನ್ನಲ್ಲಿನ ಅಜ್ಞಾನವು ಅಂತ್ಯವಾಗದು.

196. ಕರ್ಮ ತೀರದೆಹೋದರೆ ಕಾಯವೇ ನೀನು, ಕರ್ಮ ತೀರಿಹೋದರೆ ಕಾಲವೇ ನೀನು.

197. ರಾತ್ರಿ ಗೂಡಿನಲ್ಲಿ ನಿದ್ರಿಸಿ ಹಗಲು ಆಹಾರಕ್ಕಾಗಿ ವಿಹರಿಸುವ ಪಕ್ಷಿಯಂತಹದು ಮನಸ್ಸು. ಗಾಢನಿದ್ರೆಯಲ್ಲಿ ಆತ್ಮ ಎನ್ನುವ ಗೂಡಿನಲ್ಲಿ ನಿದ್ರಿಸಿ ಎಚ್ಚರಿಕೆ ಬಂದಕ್ಷಣವೇ ವಿಷಯಗಳಿಗಾಗಿ ವಿಹರಿಸುತ್ತಿರುತ್ತದೆ.

198. ನಿನಗೆ ಆತ್ಮವೇ ಮಿತ್ರನು, ಆದರೆ ಅಜ್ಞಾನದಿಂದ ಶತ್ರುವಾಗಿ ಬದಲಾಯಿಸಿಕೊಂಡಿರುವೆ. ನಿನಗೆ ಪ್ರಕೃತಿಯೇ ಶತ್ರುವು ಆದರೆ ಅಜ್ಞಾನದಿಂದ ಮಿತ್ರನಾಗಿ ಭಾವಿಸುತ್ತಿರುವೆ.

199. ಹಸಿವು ಇಲ್ಲದವನಿಗೆ ಅನ್ನವನ್ನಿಡುವುದು, ಇಷ್ಟವಿಲ್ಲದವನಿಗೆ ಆತ್ಮಜ್ಞಾನವು ಹೇಳುವುದು ಪ್ರಯೋಜನವಿಲ್ಲದ ಕೆಲಸವಾಗುವುದು.

200. ವಿಷಯಗಳಿಗೆ ನೀನು ದೂರವಾದರೆ ವಿಶ್ವೇಶ್ವರನು ನಿನಗೆ ಹತ್ತಿರವಾಗುತ್ತಾನೆ.

201. ಅಹಂಕಾರದಿಂದ ಆತ್ಮವನ್ನಾರಾಧಿಸಬೇಡ. ಅಹಂಕಾರವು ಬಿಟ್ಟುಹಾಕಿ ಆತ್ಮವನ್ನು ಆರಾಧಿಸಿದರೆ ಪರಮಾತ್ಮನನ್ನು ಸೇರಿಸಬಲ್ಲದು.

202. ನಿನ್ನ ಶರೀರವು ಮಾಡುವ ಕೆಲಸಗಳಿಗೂ, ನಿನಗೂ ಸಂಬಂಧವನ್ನು ಉಂಟುಮಾಡುತ್ತಿರುವುದು ಯಾವುದೋ ತಿಳಿದುಕೋ! ಅದೇ ಅಹಂಕಾರವು.

203. ಎಲ್ಲದರ ಜೊತೆ ಸಂಬಂಧವಿಟ್ಟುಕೋ ಆದರೆ ಅಹಂಕಾರದ ಜೊತೆಗೆ ಮಾತ್ರ ಬೇಡ.

204. ಗುಣಗಳು ಒಂದೊಂದು ಆನೆಯಷ್ಟು ಬಲವಾದವು ಆದರೆ ಜ್ಞಾನವೆನ್ನುವ ಅಂಕುಶಕ್ಕೆ ನಡುಗಾಡುತ್ತವೆ.

205. ನಿನ್ನ ಶರೀರದೊಳಗಿಂದ ನಿನಗೆ ಕಾಣಿಸದಿರುವ ಪ್ರಕೃತಿಗೆ (ಗುಣಗಳು) ಶರೀರದ ಹೊರಗೆ ನಿನಗೆ ಕಾಣಿಸುತ್ತಿರುವ ಪ್ರಕೃತಿಗೆ ಅವಿನಾಭಾವ ಸಂಬಂಧವಿರುವುದು. ಅದರ ಸಂಘರ್ಷಣೆಯ ಫಲಿತವೇ ನಿನ್ನನು ಕಳವಳಪಡಿಸುತ್ತಿರುವುದು.

206. ದ್ರವ್ಯಯಜ್ಞಕ್ಕಾಗಿ ಬಂಡವಾಳ ಕರ್ಮವನ್ನು ಸಂಪಾದಿಸಿಕೊಳ್ಳುತ್ತಿರುವೆ. ಕರ್ಮಯಜ್ಞಕ್ಕಾಗಿ ಜ್ಞಾನವನ್ನು ಸಂಪಾದಿಸಿಕೋ ಕಡೆಗಾಣುವೆ.

207. ಎಲ್ಲಾ ಜೀವಿಗಳು ಹಾಲಾಕ್ಷಿ (ಹಾಲುಕಣ್ಣು) ಗಳೇ, ಆದರೆ ಕೆಲವು ಜೀವಿಗಳಿಗೆ ಮಾತ್ರವೇ ಆ ಕಣ್ಣಿಗೆ ದೃಷ್ಟಿಇರುತ್ತದೆ.

208. ಗುಣಗಳು ನಿನ್ನತಲೆಯಲ್ಲಿಯೂ, ಗುಣಗಳ ಕೆಲಸಗಳು ನಿನ್ನ ಕಣ್ಣ ಮುಂದಿರುವವು ನೆನಪಿಟ್ಟುಕೋ.

209. ಅಹಂಕಾರವು ನಿನಗೆ ಕರ್ಮವನ್ನು ಉಂಟುಮಾಡಿದರೆ ಆ ಕರ್ಮ ಸುಖದುಃಖಗಳನ್ನು ಉಂಟುಮಾಡುತ್ತದೆ. ಗುರುಸೇವೆ ನಿನಗೆ ಜ್ಞಾನವನ್ನು ಉಂಟುಮಾಡಿದರೆ, ಆ ಜ್ಞಾನವು ನಿನ್ನ ಕರ್ಮವನ್ನು ತೊಲಗಿಸುತ್ತದೆ.

210. ಕರ್ಮ ಹೇಗೆ ಉಂಟಾಗುತ್ತದೆಂದು ತಿಳಿದುಕೋ, ಹೇಗೆ ತೊಲಗುತ್ತದೆಂದು ಸುಲಭವಾಗಿ ತಿಳಿಯುತ್ತದೆ.

211. ಆಸೆಗಳು ನಿನ್ನ ಜ್ಞಾಪಕವೆನ್ನುವ ಅಲೆಗಳನ್ನು ಹೊಡೆದೆಬ್ಬಿಸಿ ಚಲಿಸುವಂತೆ ಮಾಡುತ್ತಿರುವವು.

212. ನಡೆಯುವ ಭವಿಷ್ಯತ್ತನ್ನು ಕುರಿತು ತಿಳಿದುಕೊಳ್ಳುವುದರಿಂದ ನಿನಗೆ ಲಾಭವೇನೂಇಲ್ಲ. ನಡೆಯುವುದು ನೀನು ತಿಳಿದುಕೊಂಡರೂ ತಿಳಿದುಕೊಳ್ಳದೇಹೋದರೂ ನಡೆದು ತೀರುತ್ತದೆ.

213. ನಿನಗೆ ಅಪಜಯವು ಸಂಭವಿಸುವ ಶಕುನವನ್ನು ವಿಜಯವು ಕೈಸೇರುವವರೆಗೂ ಆಹ್ವಾನಿಸು.

214. ಶರೀರವು ಚಲಿಸುತ್ತಿದ್ದರೂ ಮನಸ್ಸನ್ನು ಚಲಿಸದಂತೆ ಮಾಡುವವನೇ ಮಹಾತ್ಮನು. ಶರೀರವು ಚಲಿಸದಿದ್ದರೂ ಮನಸ್ಸನ್ನು ಚಲಿಸುವಂತೆ ಮಾಡುವವನೇ ಮಂದಾತ್ಮನು.

215. ಗುಣಗಳೆಂಬ ವಿಷಕೋರೆಗಳಿರುವ ಮಾಯೆ ಎನ್ನುವ ಸರ್ಪವು ನಿನ್ನನ್ನು ಕಡಿದು ಹಾಕುತ್ತಿದೆ. ಆ ವಿಷಕ್ಕೆ ಸರಿಯಾದ ಔಷಧವು ಆತ್ಮ ಜ್ಞಾನವೇಯೆಂದು ತಿಳಿದುಕೋ.

216. ಕಾಮರಹಿತವಾದ ನೋಟದಿಂದ ಪ್ರಕೃತಿಯನ್ನು ವೀಕ್ಷಿಸಿದರೆ ಅದು ನಿನ್ನಿಂದ ಶೋಧಿಸಲ್ಪಡುವುದು. ಕಾಮಸಹಿತವಾದ ನೋಟದಿಂದ ಪ್ರಕೃತಿಯನ್ನು ವೀಕ್ಷಿಸಿದರೆ ಅದೇ ನಿನ್ನನ್ನು ಬಾಧಿಸಲ್ಪಡುವುದು.

217. ಆಸೆ ನಿನಗೆ ತಿಳಿಯದ ಹಾಗೆ ನಿನ್ನಲ್ಲಿನ ತೃಪ್ತಿಯನ್ನು ಬಲಿ ತೆಗೆದುಕೊಳ್ಳುತ್ತಿರುವ ಮಹಾಶಕ್ತಿ.

218. ಆಸೆಯನ್ನು ತೃಪ್ತಿ ಪಡಿಸಬೇಕೆಂದು ಆಶಿಸುವುದರಲ್ಲಿಯೇ ನಿನ್ನ ಆಯುಸ್ಸು ಮುಗಿದುಹೋಗುತ್ತಿರುವುದು. ಆದರೆ ಅದು ಮಾತ್ರ ತೃಪ್ತಿಹೊಂದುವುದಿಲ್ಲ.

219. ಆಸೆ ತವಕವನ್ನು ತೀರಿಸಬೇಕೆಂದರೆ ಆತ್ಮೋಫಲಭ್ಯತೆಯಿಂದಲೇ ಸಾಧ್ಯವಾಗುತ್ತದೆ ಆದರೆ ಅದು ಮತ್ತ್ಯಾವುದರಜೊತೆಯು ಸಾಧ್ಯವಾಗದು.

220. ಅವಕಾಶವು ಇದ್ದರೇ ಆಕಾಶಕ್ಕಿಂತಲೂ ದೊಡ್ಡದಾಗುತ್ತದೆ ಆಸೆ.

221. ಕೋರುವುದು ಈ ಜನ್ಮದಲ್ಲಿ! ತೀರುವುದು ಮರು ಜನ್ಮದಲ್ಲಿ!

222. ಮಾಯೆಗೂ ಮನಸ್ಸಿಗೂ ಮಧ್ಯೆ ಹೋರಾಟವನ್ನಿಟ್ಟು ಮನಸ್ಸಿನಿಂದ ಮಾಯೆಯನ್ನು ಜಯಿಸುವಂತೆ ಮಾಡುವುದನ್ನು ಮಾನವನು ಮಾಡಬೇಕಾದ ಯೋಗಸಾಧನೆ.

223. ಮನುಷ್ಯನ ಒಂದು ಜೀವನ ಪ್ರಯಾಣದಲ್ಲಿ ಎರಡು ಮಾರ್ಗಗಳು ಇರುವವು. ಅದರಲ್ಲಿ ಒಂದು ಮಾಯಾಮಾರ್ಗವು (ಪ್ರಕೃತಿಮಾರ್ಗವು), ಎರಡನೆಯದು ದೈವಮಾರ್ಗವು (ಪರಮಾತ್ಮನಮಾರ್ಗವು).

224. ಒಂದು ಕಥೆಯಲ್ಲಿರುವ ಒಳ್ಳೆಯ ಕೆಟ್ಟವುಗಳಲ್ಲಿ ಒಳ್ಳೆಯದನ್ನು ಗ್ರಹಿಸು, ಕೆಟ್ಟದನ್ನು ವಿಸರ್ಜಿಸು (ತೊರೆದುಹಾಕು).

225. ಒಂದು ಮನುಷ್ಯನಲ್ಲಿರುವ ಜ್ಞಾನ ಅಜ್ಞಾನಗಳಲ್ಲಿ ಜ್ಞಾನವನ್ನು ಗ್ರಹಿಸು ಅಜ್ಞಾನವನ್ನು ವಿಸರ್ಜಿಸು.

226. ಮನುಷ್ಯ ಹೇಳುವ ಮಾತುಗಳಲ್ಲಿ ಎಲ್ಲಾ ನಿಜವೆಂದು ನಂಬಬೇಡ, ದೇವರು ಹೇಳಿದ ಮಾತುಗಳಲ್ಲಿ ಎಲ್ಲಾ ನಿಜವೆಂದು ತಿಳಿದುಕೋ!

227. ಭೂಮಿಮೇಲೆ ಮಿತ್ರರು ಶತ್ರುಗಳಿರುವಹಾಗೆ, ಶರೀರದೊಳಗೆ ಜೀವಿಗೆ (ಜೀವಾತ್ಮನಿಗೆ) ಮಿತ್ರರೆಂಬ ಗುಣಗಳು, ಶತ್ರುಗಳೆನ್ನುವ ಗುಣಗಳು ಎರಡು ವಿಧಗಳಿರುವವು.

228. ಹುಳಿಗೆ ಉಪ್ಪು, ಕಹಿಗೆ ಸಿಹಿ ಹೇಗೆ ವಿರುದ್ಧವಾಗಿ ಇವೆಯೋ ಹಾಗೆಯೇ ಶರೀರದಲ್ಲಿ ಕಾಮಕ್ಕೆ ದಾನ, ಕೋಪಕ್ಕೆ ದಯೆ, ಲೋಭಕ್ಕೆ ಔದಾರ್ಯ, ಮೋಹಕ್ಕೆ ವೈರಾಗ್ಯ, ಮದಕ್ಕೆ ವಿನಯ, ಮತ್ಸರಕ್ಕೆ ಪ್ರೇಮ ಎನ್ನುವವು ವಿರುದ್ಧ.

229. ಉಪ್ಪು ನೀರಿನಲ್ಲಿ ಕರಗಿ ತಿಳಿಯದಿರುವಂತೆ, ಮಾಯೆ ಶರೀರದಲ್ಲಿ ಬೆರೆತಿರುವುದು.

230. ಆದೇಶವು ಅಧಿಕಾರದಿಂದ ಕೂಡಿಕೊಂಡಿರುವ ಹಾಗೆ ಉಪದೇಶವು ಅನಧಿಕಾರದಿಂದ ಕೂಡಿಕೊಂಡಿರುವುದು.

231. ದೃಷ್ಟಿಗೆ ದೇಶವು ಪ್ರದೇಶವು ಕಾಣಿಸುವ ಹಾಗೆ, ಜ್ಞಾನದೃಷ್ಟಿಗೆ ಉಪದೇಶವು ಅಪ್ರದೇಶವು ತಿಳಿಯುವುದು.

232. ಕಣ್ಣಿಗೆ ದೃಷ್ಟಿ ಇರುವುದು, ಹಾಗೆಯೇ ಬುದ್ದಿಗೆ ಜ್ಞಾನದೃಷ್ಟಿ ಇರುವುದು.

233. ರೋಗಕ್ಕೆ ಔಷಧವು, ಮಾಯಾ ರೋಗಕ್ಕೆ ದಿವ್ಯ ಔಷಧವು ಅಗತ್ಯ.

234. ಔಷಧವು ವಸ್ತುಗಳಿಂದ ಕೂಡಿಕೊಂಡಿರುವುದಾದರೆ, ದಿವ್ಯ ಔಷಧವು ಜ್ಞಾನದಿಂದ ಕೂಡಿಕೊಂಡಿದೆ.

235. ರೋಗವು ಶರೀರಕ್ಕೆ, ಬಾಧೆ ಜೀವಿಗೆ, ಮೂಲುವುದು ಆತ್ಮಕ್ಕೆ, ತಟಸ್ಥತೆ ಪರಮಾತ್ಮನಿಗೆ ಇರುವುದು.

236. ದೊಡ್ಡದಾದ ಆನೆಯ ಶರೀರದಲ್ಲಿ ಜಿವಾತ್ಮ, ಆತ್ಮ, ಪರಮಾತ್ಮ ಇರುವಹಾಗೆ ಚಿಕ್ಕದಾದ ಇರುವೆಯಲ್ಲಿಯೂ ಸಹ ಜೀವಾತ್ಮ, ಆತ್ಮ, ಪರಮಾತ್ಮ ಇರುವವೆಂದು ತಿಳಿಯುವವನೇ ನಿಜವಾದ ಜ್ಞಾನಿ.

237. ನಿಂಬೆಗೆ ನೀರು ಹತ್ತಿದಂತೆ ಕೊಂಬೆಗೆ ಹಾವು ಹತ್ತಲಾಗದು. ಹಾಗೆಯೇ ಮನುಷ್ಯನಿಗೆ ಅಜ್ಞಾನವು ಹತ್ತಿದಂತೆ ಜ್ಞಾನವು ಹತ್ತಲಾಗದು.

238. ಮಳೆಗೆ ಮಾತ್ರವೇ ಮಳೆಹಾವು ಹೊರಗೆಬರುವುದು. ನೀರಿಗೆಮಾತ್ರವೇ ಕಪ್ಪೆಗಳುಹೊರಗೆ ಬರುವುದು. ಜ್ಞಾನಕ್ಕೆ ಮಾತ್ರವೇ ಜಿಜ್ಞಾಸುಗಳು ಹೊರಗೆ ಬರುತ್ತಾರೆ.

239. ನೇತ್ರಗಳಿಗೆ ದೃಷ್ಟಿ ಇರುವಹಾಗೆ ಜ್ಞಾನನೇತ್ರಕ್ಕೆ ಜ್ಞಾನವೇ ದೃಷ್ಯವಾಗುತ್ತದೆ.

240. ಭೂಮಿಮೇಲೆ ಗುರುಗಳಲ್ಲಿ ಮಾಯೆ ಸುಸ್ಥಿರವಾಗಿ ಇರುವುದು ಜಾಗ್ರತ್ತೆ!

241. ಭಗವಂತನು ಹೇಳಿರುವುದು ದೈವ ಜ್ಞಾನವು. ಮನುಷ್ಯರು ಹೇಳಿರುವುದು ದೈವಜ್ಞಾನವು ಅಲ್ಲ.

242. ಮಾಯೆ ಭಗವಂತನಹಾಗೆ ಜಗತ್ತಿನಲ್ಲಿ ಪ್ರಕಟಿತ (ಪ್ರಸಿದ್ಧಿ) ವಾಗುತ್ತಿದೆ.

243. ದೇವರು ಮಾಯೆಯಂತೆ ಜಗತ್ತಿನಲ್ಲಿ ಪ್ರಕಟಿತವಾಗುತ್ತಿದ್ದಾನೆ.

244. ಜಗತ್ತಿನಲ್ಲಿ ಮಾಯೆ ದೇವರ ಹಾಗೆ, ದೇವರು ಮಾಯೆ ಹಾಗೆ ಕಾಣಿಸುವುದು ಸಹಜ.

245. ಜಗತ್ತಿನಲ್ಲಿ ಮಾಯೆ ಯಾವುದೋ, ದೇವರು ಯಾರೋ ತಿಳಿಯಬೇಕೆಂದರೆ ಮಹತ್ವವಾದ ಜ್ಞಾನವು ಅವಶ್ಯಕ.

246. ಭಗವಂತನು ಮಾಯೆಯಂತೆ ಕಾಣಿಸಿದರೂ, ಕೊನೆಗೆ ದೈವಜ್ಞಾನವನ್ನೇ ಬೋಧಿಸುವನು. ಮಾಯೆ ದೇವರ ಹಾಗೆ ಕಾಣಿಸಿದರೂ, ಕೊನೆಗೆ ದೇವರ ಮಾರ್ಗವನ್ನು ಬಿಟ್ಟು ತನ್ನ ಮಾರ್ಗವನ್ನು ಅನುಸರಿಸುವ ಹಾಗೆ ಬೋಧಿಸುವನು.

247. ದೇವರು ಮತಗಳನ್ನು ಕುಲಗಳನ್ನು ಸೃಷ್ಟಿಸಲಿಲ್ಲ.

248. ಮಾಯೆಯನ್ನು, ಮನುಷ್ಯರನ್ನು ಸೃಷ್ಟಿಸಿರುವುದು ದೇವರೊಬ್ಬನೇ.

249. ಮತಗಳನ್ನು ಅನುಸರಿಸಿ ಅನೇಕ ವಿಧಾನಗಳಿಂದ, ಅನೇಕ ಹೆಸರುಗಳಿಂದ, ಬೇರೆಬೇರೆಯಾಗಿ ಕರೆಯಲ್ಪಟ್ಟಿರುವವನು ಒಬ್ಬ ದೇವರೇ.

250. ಸರ್ವ ಜಗತ್ತಿಗೂ ಅಧಿಪತಿಯಾಗಿ, ಸರ್ವ ಪ್ರಪಂಚಕ್ಕೂ ಸೃಷ್ಟಿಕರ್ತನಾಗಿ, ವಿಶ್ವಕ್ಕೆಲ್ಲಾ ಮೂಲಕರ್ತನಾಗಿ ಇರುವವನು ಒಂದೇ ದೇವರು.

251. ದೇವರಿಗೆ ಒಂದು ಹೆಸರಾಗಲಿ ಆಕಾರವಾಗಲಿ ಇರುವುದಿಲ್ಲ.

252. ದೇವರು ತನ್ನವಿಷಯವನ್ನು ತಾನೇ ಹೇಳಬೇಕು, ಇತರರಿಗೆ ತನ್ನ ವಿಷಯವು ತಿಳಿಯದು.

253. ದೇವರು ತನ್ನ ವಿಷಯಗಳನ್ನು ತಿಳಿಸುವುದಕ್ಕೆ ಭೂಮಿಮೇಲೆ ಬಂದಾಗ ಭಗವಂತನೆಂದು ಕರೆಯಲ್ಪಡುವನು. ಭಗವಂತನಿಗೆ ಹೆಸರು ಆಕಾರವು ಇರುವವು.

254. ಮೂಢನಂಬಿಕೆಯೂ, ಮೂಢಜ್ಞಾನವು ಎರಡು ಒಂದುಜಾತಿಗೆ ಸಂಬಂಧಿಸಿರುವವೇ.

255. ಮನುಷ್ಯನಿಗೆ ಆರೋಗ್ಯವಂತದ್ದು ನಂಬಿಕೆಯು, ಆದರೆ ಮನುಷ್ಯನಿಗೆ ರೋಗವಂತದ್ದು ಮೂಢನಂಬಿಕೆಯು.

256. ನಿನ್ನ ತಾಯಿ ತಂದೆ ನಂಬಿಕೆಯೇ, ಆದರೆ ನಿನ್ನ ಮತವೂ ಕುಲವೂ ಮೂಢನಂಬಿಕೆ.

257. ಶಾಸ್ತ್ರವು ನಂಬಿಕೆಯು, ಪುರಾಣವು ಮೂಢನಂಬಿಕೆ.

258. ಶಾಸ್ತ್ರಬದ್ಧವಾದ ನಂಬಿಕೆಯು ಎಂದಿಗೂ ಅಸತ್ಯವಾಗದು. ಹೇತುಬದ್ಧವಲ್ಲದ ಮೂಢನಂಬಿಕೆಯು ಎಂದಿಗೂ ಸತ್ಯವಾಗದು.

259. ದೇವರನ್ನು ಆರಾಧಿಸುವುದು ನಂಬಿಕೆಯೇ ಆದರು, ಚಿಲ್ಲರೆ (ಇತರೆ) ದೇವತೆಗಳನ್ನು ಆರಾಧಿಸುವುದು ಮೂಢನಂಬಿಕೆಯಾಗುವುದು.

260. ನಂಬಿಕೆಗಳಿರಬಹುದು, ಇರದೇ ಹೋಗಬಹುದು. ಆದರೆ ಮೂಢನಂಬಿಕೆಗಳು ಯಾವ ಮಾತ್ರ ಇರಬಾರದು.

261. ಜ್ಯೋತಿಷ್ಯ ಶಾಸ್ತ್ರದಲ್ಲಿ ನಂಬಿಕೆಯಿರುವುದು, ಆದರೆ ವಾಸ್ತು ಶಾಸ್ತ್ರದಲ್ಲಿ ಮೂಢನಂಬಿಕೆಯಿರುವುದು.

262. ಅಜ್ಞಾನ ಮನುಷ್ಯರಿಗೆ ಸೇವೆಮಾಡಬೇಡ, ಜ್ಞಾನಿಗಳಿಗೆ ಸೇವೆಮಾಡುವುದರಿಂದ ಜೀವನಕ್ಕೆ ಜ್ಞಾನವು ಲಭ್ಯವಾಗುವುದು.

263. ಮನಸ್ಸಿಗೆ ಆಕಾರವಿರುವುದು, ಆದರೆ ಅದರ ಕೆಲಸಕ್ಕೆ ಹದ್ದೇ ಇಲ್ಲ.

264. ಲೋಚನೆ ಎಂದರೆ ಕಣ್ಣು. ಒಳಗಿನ ಕಣ್ಣನ್ನು ಆಲೋಚನೆ ಎನ್ನುವರು.

265. ಹೊರಗಿನ ಕಣ್ಣುಗಳು ಎರಡು ಬೆರೆತು ಒಂದು ದೃಶ್ಯವನ್ನು ತೋರಿಸುವವು. ಒಳಗಿನ ಕಣ್ಣುಗಳು ಎರಡು ಬೆರೆಯುವುದಿಲ್ಲ.

266. ಮನುಷ್ಯನಿಗೆ ಹುಟ್ಟಿನಿಂದ ಬರುವವು ಎರಡು ಕಣ್ಣುಗಳು, ಬೆಳೆಯುತ್ತಾ ಬರುವವು ಮತ್ತೆರಡು ಕಣ್ಣುಗಳು.

267. ಒಳಗಿನ ಕಣ್ಣುಗಳು ಎರಡು ವಿಭಿನ್ನವಾದವು. ಒಂದು ಪ್ರಪಂಚ ವಿಷಯಗಳನ್ನು ತೋರಿಸುವುದು. ಎರಡನೆಯದು ದೇವರ ವಿಷಯಗಳನ್ನು ತೋರಿಸುವುದು. ಮೊದಲನೆಯದು ಮನೋನೇತ್ರವು, ಎರಡನೆಯದು ಜ್ಞಾನನೇತ್ರವು.

268. ಪ್ರತಿ ಜೀವಿಗೆ ಕರ್ಮದಿಂದ ಸಂಭವಿಸುವುದು ಮೂರು ಕಣ್ಣುಗಳಾದರೇ ಶ್ರದ್ಧೆಯಿಂದ ಸಂಭವಿಸುವುದು ಒಂದೇ ಒಂದು ಕಣ್ಣು ಅದೇ ಜ್ಞಾನನೇತ್ರವು.

269. ಮಾನವನಿಗೆ ಮನೋನೇತ್ರವು ತೆರೆದುಕೊಂಡರೆ ಜ್ಞಾನನೇತ್ರವು ಮುಚ್ಚುವುದು. ಜ್ಞಾನನೇತ್ರವು ತೆರೆದುಕೊಂಡರೇ ಮನೊನೇತ್ರವು ಮುಚ್ಚುವುದು.

270. ಯಾವುದು ಜ್ಞಾನ ನೇತ್ರವೋ, ಯಾವುದು ಮನೋನೇತ್ರವೋ ಮಾನವನು ಸುಲಭವಾಗಿ ಗುರ್ತಿಸಲಾರನು.

271. ಜ್ಞಾನನೇತ್ರವು, ಮನೋನೇತ್ರವು ಎರಡೂ ಭಗವಂತನಿಗೆ ಮಾತ್ರವೇ ಒಂದೇ ಸಮಯದಲ್ಲಿ ಕೆಲಸಮಾಡುತ್ತಿರುತ್ತವೆ.

272. ದೇಶದಲ್ಲಿ ಅತ್ಯುತ್ತಮವಾದ ಜ್ಞಾನವು, ಅತ್ಯುತ್ತಮವಾದ ಅಜ್ಞಾನವೂ ಇರುವವು. ಯಾವುದು ಯಾರಿಗೆ ಇಷ್ಟವೋ ಅದೇ ಲಭಿಸುವುದು.

273. ದೇಶದಲ್ಲಿ ಬೋಧಕರೆಷ್ಟೋ ಇರುವರು. ಬೋಧಕರೆಲ್ಲರೂ ಗುರುವಿನ ಹಾಗೆ ಕಾಣಿಸುತ್ತಿರುವರು. ಹಾಗಿದ್ದರೂ ದೇಶದಲ್ಲಿ ಗುರುವು ಒಬ್ಬನೇ ಒಂದುಸಮಯದಲ್ಲಿಯೇ ಇರುವನು.

274. ಒಂದು ರೂಪಾಯಿಗೆ ನೂರು ಪೈಸೆಗಳಿರುವಹಾಗೆ ದೇಶದಲ್ಲಿ ಪೈಸಾ ಸ್ಥಾಯಿಯಿಂದ 99 ಪೈಸೆಗಳ ಸ್ಥಾಯಿಯವರೆಗೂ ಬೋಧಕರಿರುವರು.
100 ಪೈಸೆಗಳ ಸ್ಥಾಯಿಯಲ್ಲಿ ಗುರುವಿರುವನು.

275. ಗುರುವನ್ನು ಗುರುತಿಸುವುದು ಬಹಳ ಕಷ್ಟ. ಏಕೆಂದರೆ ಒಂದು ಪೈಸೆಸ್ಥಾಯಿಯಿಂದ 99 ಪೈಸೆಗಳಸ್ಥಾಯಿಯವರೆಗೂ ಕಾಣಿಸುತ್ತಿರುವನು.

276. ಗುರುವು ಬೋಧಕನ ಹಾಗೆ, ಬೋಧಕನು ಗುರುವಿನ ಹಾಗೆ ಕಾಣಿಸುವುದು ಸಹಜ. ಹಾಗಿದ್ದರೂ ಗುರುವು ಗುರುವೇ, ಬೋಧಕನು ಬೋಧಕನೇ!

277. ಭಗವಂತನೇ ನಿಜಗುರುವು ಆದ್ದರಿಂದ ಗುರುವು ಸ್ವಲ್ಪಕಾಲ ಭೌತಿಕವಾಗಿ, ಸ್ವಲ್ಪಕಾಲ ಅಭೌತಿಕವಾಗಿ ಇರುವನು.

278. ನಿಜಗುರುವಾದ ಭಗವಂತನೊಬ್ಬನೇ ಜಗತ್ತಿನಲ್ಲಿ ಜಗದ್ಗುರುವು. ಶಿಷ್ಯರು ಹೆಚ್ಚಾಗಿ ಇರುವವನು ಜಗದ್ಗುರುವಲ್ಲ.

279. ಜಗತ್ತಿನಲ್ಲಿ ಸಕಲಜೀವಿಗಳಿಗೆ ಸಮನ್ವಯಿಸುವ ಜ್ಞಾನವನ್ನು ತಿಳಿಸುವವನು ಜಗದ್ಗುರುವು.

280. ಜಗದ್ಗುರುವಾದ ಭಗವಂತನು ತಂದೆವೀರ್ಯದಿಂದ ಅಲ್ಲದೆ ತನ್ನ ಸಂಕಲ್ಪದಿಂದಲೇ ಹುಟ್ಟುವನು.

281. ಭಗವಂತನಿಗೆ ಭೂಮಿಮೇಲೆ ತಾಯಿ ಇರಬಹುದು, ಆದರೆ ತಂದೆ ಇರುವುದಿಲ್ಲ.

282. ಪರಮಾತ್ಮನ ಪ್ರತಿನಿಧಿ ಭಗವಂತನು. ಭಗವಂತನು ಸಾಕಾರನು. ಪರಮಾತ್ಮ ನಿರಾಕಾರನು.

283. ಪ್ರಪಂಚದಲ್ಲಿ ಭಗವಂತನ ಮೂಲಕ ಪರಮಾತ್ಮನನ್ನು (ದೇವರನ್ನು) ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗುವುದು.

284. ಭಗವಂತನು ಹೊರೆತು ಮತ್ಯಾವ ಇತರ ಮಾನವನು ದೇವರನ್ನು ಕುರಿತು ತಿಳಿಸಲಾರನು.

285. ಭಗವಂತನು ದೇವರ (ಪರಮಾತ್ಮ) ಅಂಶವೇ ಆದ್ದರಿಂದ ದೇವರ ವಿಷಯವು ಭಗವಂತನಿಗೇ ತಿಳಿಯುವುದು.

286. ದೇವರು ಭೂಮಿಮೇಲೆ ಯಾವಾಗ, ಎಲ್ಲಿ, ಹೇಗೆ, ಯಾವ ರೂಪದಲ್ಲಿ ಹುಟ್ಟುವನೋ ಯಾರಿಗೂ ತಿಳಿದಿಲ್ಲ. ಆದ್ದರಿಂದ ಆತನ ಅವತಾರವನ್ನು ಪ್ರಜೆಗಳು ವಿಭಿನ್ನವಾಗಿ ನೋಡುತ್ತಿರುವರು.

287. ಮಾನವನಾಗಿ ಬಂದ ದೇವರು ಒಂದುಜನ್ಮದಲ್ಲಿ ಬಿಕಾರಿಯಾಗಿ, ಒಂದು ಜನ್ಮದಲ್ಲಿ ಧನಿಕನಾಗಿ ಇರಬಹುದು. ಹಾಗೆಯೇ ಒಂದು ಜನ್ಮದಲ್ಲಿ ಬ್ರಹ್ಮಚಾರಿಯಾಗಿ ಮತ್ತೊಂದು ಜನ್ಮದಲ್ಲಿ ಬಹು ಪತ್ನಿಗಳನ್ನು ಪಡೆದ ವಿಲಾಸ ಪುರುಷನಾಗಿ ಇರಬಹುದು. ಅಷ್ಟುಮಾತ್ರಕ್ಕೆ ತುಂಬಾಜನರು ಭಗವಂತನನ್ನು ಗುರುತಿಸಲಾಗದೆ ಹೋಗುತ್ತಿದ್ದಾರೆ.

288. ದೇವರು ಮಾನವನಾಗಿ ಭೂಮಿಮೇಲಕ್ಕೆ ಬಂದಾಗ, ಆತನನ್ನು ಗುರುತಿಸದ ಜ್ಞಾನಿಗಳು ಅದೇ ದೇವರು ಹಿಂದಿನ ಜನ್ಮದಲ್ಲಿ ಹೇಳಿದ ಮಾತುಗಳನ್ನೇ ಆತನಿಗೇ ತಿಳಿ ಹೇಳಿ ಅವರಿಗಿಂತಲೂ ಕಡಿಮೆಯವನಾಗಿ ಲೆಕ್ಕಿಸುತ್ತಾರೆ.

289. ದೇವರು ಭಗವಂತನಾಗಿ ಗತಕಾಲದಲ್ಲಿ ಹೇಳಿದ ಮಾತುಗಳನ್ನು ವಿಶ್ವಾಸಿಸಿದವರು, ಆ ಮಾತುಗಳಿಗೆ ಸರಿಯಾದ ಅರ್ಥಗಳು ತಿಳಿಯದೇ,

ಆತನೇ ಎರಡನೆಯಬಾರಿ ಬಂದಾಗ ಆತನನ್ನೇ ಗುರುತಿಸಲಾಗದೆ ಹೋಗುತ್ತಿದ್ದಾರೆ.

290. ಜೀವಿಯು ದೇವರನ್ನು ಸೇರಿದರೇ ಅದುವೇ ಜೀವದೈವೈಕ್ಯ ಸಂಧಾನವೆಂದು, ಎಲ್ಲೆಡೆ ವ್ಯಾಪಿಸಿ ಹೋಗುತ್ತಿರುವನೆಂದು ತಿಳಿಯದೇ, ಮೋಕ್ಷವೆನ್ನುವ ಪರಲೋಕವನ್ನು ಒಂದು ಸ್ಥಳವೆಂದು, ಒಂದು ವಿಶಾಲವಾದ ಭವನವೆಂದು ತಿಳಿದುಕೊಳ್ಳುವುದು ಅಜ್ಞಾನವು.

291. ದೇವರನ್ನು ಸೇರಿದವನು ದೇವರಿಗಿಂತಲೂ ಬೇರೆಯಾಗಿ ಇರುವುದಿಲ್ಲ. ಆದ್ದರಿಂದ ಅವನಿಗೊಂದು ಸ್ಥಳವು, ಒಂದು ಊರು, ಒಂದುಮನೆ ಏನೂ ಇರುವುದಿಲ್ಲ.

292. ದೇವರನ್ನು ಸೇರಿದವನು ದೇವರೇ ತಾನಾಗಿ, ತಾನೇ ದೇವರಾಗಿ ವಿಶಾಲವಾಗಿ ಅಣುಅಣುವೂ ವ್ಯಾಪಿಸಿರುವನು.

293. ಮಾಯೆ (ಸೈತಾನ್) ಅಥವಾ ಸಾತಾನ್ ಮಾನವನನ್ನು ಮತಗಳ ಹೆಸರಿನಲ್ಲಿ ಮಭ್ಯವಿಡುತ್ತಿರುವುದು.

294. ಮತವು ದೇವರನ್ನು ತಿಳಿಸುವುದಿಲ್ಲ. ಜ್ಞಾನವೇ ದೇವರನ್ನು ತಿಳಿಸುವುದು.

295. ದೈವವು ಒಂದು ಮತಕ್ಕೆ ಸಂಬಂಧಿಸಿದವನಲ್ಲ.

296. ಮತದ ಮರೆಯಲ್ಲಿ ದೇವರನ್ನು ಊಹಿಸಿಕೊಂಡು, ಮತಗಳಿಗೆ ದೇವರನ್ನು ಪರಿಮಿತಿಮಾಡಿ ಮಾತನಾಡುವುದು ಅಜ್ಞಾನವೇ ಆಗುವುದು. ಎಲ್ಲಾ ಮತಗಳಿಗೂ ಅಧಿಪತಿ ಒಂದೇ ದೇವರೆಂದು ತಿಳಿಯುವುದೇ ಜ್ಞಾನವಾಗುವುದು.

297. ದೇವರೆಂದಾದರು ಭೂಮಿಮೇಲಕ್ಕೆ ಬಂದರೆ ಭಗವಂತನಾಗಿಯೇ ಬರುತ್ತಾನೆ. ಅಂದರೆ ಪುರುಷ ಆಕಾರದಿಂದಲೇ ಬರುತ್ತಾನೆ, ಸ್ತ್ರೀ ಆಕಾರದಿಂದ ಬರುವುದಿಲ್ಲ.

298. ಸ್ತ್ರೀ ಪುರುಷರಲ್ಲಿ ಸ್ತ್ರೀ ಪ್ರಕೃತಿಗೆ, ಪುರುಷನು ಪರಮಾತ್ಮನಿಗೆ ಚಿಹ್ನೆಯೆಂದು ತಿಳಿಯಬೇಕು.

299. ದೇವರು ಭಗವಂತನಾಗಿ ಭೂಮಿಮೇಲಕ್ಕೆ ಬಂದರೆ ಪ್ರಕೃತಿ ಕೂಡ ಪುರುಷಜನ್ಮ ತೆಗೆದುಕೊಂಡು ತಾನೇ ಭಗವಂತನೆಂದು ನಟಿಸಿ ನಂಬಿಸುತ್ತಿದೆ.

300. ಭೂಮಿ ಮೇಲಕ್ಕೆ ಬಂದ ದೇವರಾಗಲಿ, ಪ್ರಕೃತಿಯಾಗಲಿ ತಾವು ಇಂಥದೆಂದು ತಿಳಿಯದ ಹಾಗೆ ನಡೆದುಕೊಳ್ಳುವರು.

301. ಭೂಮಿಮೇಲಕ್ಕೆ ಬಂದ ದೇವರು ತಾನು ಭಗವಂತನೆಂದು ಹೇಗೆ ಹೇಳುವುದಿಲ್ಲವೋ ಹಾಗೆಯೇ ಪ್ರಕೃತಿ ತಾನು ಮಾಯೆಯೆಂದು ಹೇಳುವುದಿಲ್ಲ.

302. ದೇವರ ಜ್ಞಾನವನ್ನು ಸಂಪೂರ್ಣವಾಗಿ ತಿಳಿಯದವರು ಭಗವಂತನನ್ನು ಸಾಮಾನ್ಯ ಮಾನವನಾಗಿ, ಮಾಯೆಯನ್ನು ಭಗವಂತನಾಗಿ ಹೋಲಿಸಿಕೊಳ್ಳುವರು.

303. ಭೂಮಿ ಮೇಲೆ ಹುಟ್ಟಿದ ಪ್ರತೀಜೀವಿ ಆತ್ಮ ಅಂಶವೇ ಆಗಿದ್ದರೂ ಪ್ರಕೃತಿ ಲಕ್ಷಣಗಳನ್ನು ಹೊಂದಿರುವುದು.

304. ಜೀವಾತ್ಮ ಪುರುಷನ ಅಂಶವೇ ಆಗಿದ್ದರೂ ಪ್ರಕೃತಿ ಅಂಶವಾದ ನಪುಂಸಕತ್ವವನ್ನು ಹೊಂದಿರುವುದು.

305. ಶರೀರದಲ್ಲಿ ಮೂರು ವಿಧಗಳ ಆತ್ಮಗಳು, ಐದು ವಿಧಗಳ ಪ್ರಕೃತಿ ಇರುವವು.

306. ಪರಮಾತ್ಮ, ಆತ್ಮ, ಜೀವಾತ್ಮ ಎನ್ನುವ ಮೂರು ಆತ್ಮಗಳು ಆಕಾಶವು, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಐದು ಪ್ರಕೃತಿಗಳು ಬೆರೆತು ಸಜೀವ ಶರೀರವು ಏರ್ಪಟ್ಟಿರುವುದು.

307. ಶರೀರವು ಐದು ವಿಧಗಳ ಉಪಕರಣವು ಆಗಿ, ಉಪಕರಣಗಳನ್ನು ಉಪಯೋಗಿಸಿ ಆತ್ಮ ಕೆಲಸ ಮಾಡುತ್ತಿರುವಾಗ, ಪರಮಾತ್ಮ ನೋಡುತ್ತಿರುವಾಗ, ಜೀವಾತ್ಮ ಅನುಭವಿಸುತ್ತಿರುವನು.

308. ಶರೀರದಲ್ಲಿ ಕಾಣಿಸುವ ಅವಯವಗಳು, ಕಾಣಿಸದ ಗುಣಗಳು ಮನಸ್ಸು,

ಬುದ್ಧಿ, ಚಿತ್ತವು ಅಹಂಕಾರಗಳು ಎಲ್ಲವೂ ಎಷ್ಟೋ ಭಾಗಗಳಾಗಿ ಪ್ರಕೃತಿಯಿಂದ ಹುಟ್ಟಿದವುಗಳಾದಾಗ, ಪರಮಾತ್ಮ ಹುಟ್ಟಿದವುಗಳಾಗಿ ಕೇವಲ ಆತ್ಮ ಜೀವಾತ್ಮ ಎರಡು ಮಾತ್ರವಿರುವವು!

309. ಶರೀರವೆಲ್ಲಾ ವ್ಯಾಪಿಸಿ ಕೆಲಸವೆಲ್ಲಾ ಮಾಡುವ ಆತ್ಮಯಾರಿಗೂ ತಿಳಿಯದಾಗಿ ತೆರೆಯಹಿಂದೆ ಇರುವಾಗ, ಶರೀರದಲ್ಲಿ ಒಂದುಕಡೆ ನಿವಾಸವಿರುವ ಜೀವಾತ್ಮ ಏನು ಮಾಡದಿದ್ದರೂ, ತನಗೇನು ತಿಳಿಯದಿದ್ದರು, ಎಲ್ಲಾ ತಾನೇ ಮಾಡುತ್ತಿರುವಹಾಗೆ ಎಲ್ಲಾ ತನಗೇ ತಿಳಿದಿರುವಹಾಗೆ ಭ್ರಮಿಸುತ್ತಾ ತೆರೆಯ ಮೇಲಕ್ಕೆ ಬಂದಿರುವನು.

310. ಶರೀರವೆಲ್ಲಾ ಪ್ರಕೃತಿಯಾಗಿರುವಾಗ, ಶರೀರದಲ್ಲಿ ಮೂಲಸೂತ್ರಧಾರಿ ಪರಮಾತ್ಮನಾಗಿರುವಾಗ, ಎಲ್ಲಾ ಸಮಯದಲ್ಲಿಯೂ ಪಾತ್ರಧಾರಿಯಾಗಿ ಆತ್ಮ ಇರುವಾಗ, ಸೂತ್ರಧಾರಿ ಪಾತ್ರಧಾರಿಯಲ್ಲದ ಜೀವಾತ್ಮ ಎಲ್ಲಾಶರೀರವೇ ತಾನೆಂದು ಭ್ರಮಿಸುತ್ತಾ ತನಹಿಂದಿರುವ ಆತ್ಮ ಪರಮಾತ್ಮನನ್ನಾಗಲಿ ಪ್ರಕೃತಿಯನ್ನಾಗಲಿ ತಿಳಿಯದೇಹೋಗುತ್ತಿರುವನು.

311. ಶರೀರದಲ್ಲಿ ಆತ್ಮ ಯಾವಾಗಲು ಒಂದು ಕ್ಷಣವುಕೂಡ ಸುಮ್ಮನಿರದೇ ಎಚ್ಚರಿಕೆಯಿಂದ ಕೆಲಸಮಾಡುತ್ತಿರುವಾಗ, ಜೀವಾತ್ಮ ನಡೆಯುತ್ತಿರುವುದನ್ನು ಸ್ವಲ್ಪಹೊತ್ತು ನೋಡಿ ಅನುಭವಿಸಿ, ಸ್ವಲ್ಪಹೊತ್ತು ನೋಡದೆ ಸುಮ್ಮನಿರುವುದು. ನೋಡಿ ಅನುಭವಿಸುವ ಕಾಲವನ್ನು ಎಚ್ಚರಿಕೆಯೆಂದು, ನೋಡದೆ ಸುಮ್ಮನಿರುವಕಾಲವನ್ನು ನಿದ್ರೆಯೆಂದು ಕರೆಯುತ್ತೇವೆ.

312. ಶರೀರದಲ್ಲಿ ಜೀವಾತ್ಮ ಏನು ತಿಳಿಯದ ಎಲ್ಲಾವಿಧಗಳ ಅಂಧಕಾರನಾಗಿರುವಾಗ, ಅವನಿಗೆ ಪಂಚಜ್ಞಾನೇಂದ್ರಿಯಗಳು ಎಲ್ಲಾ ವಿಷಯಗಳನ್ನು ತಿಳಿಸುತ್ತಿರುವವು.

313. ಶರೀರದಲ್ಲಿ ತನ್ನ ನಿಜಸ್ಥಿತಿಯನ್ನು ತಿಳಿಯದ ಜೀವಾತ್ಮ ಎಲ್ಲಾ ತಾನೇ ತಿಳಿದುಕೊಳ್ಳುತ್ತಿರುವ ಹಾಗೆ, ಎಲ್ಲಾ ತಾನೇ ಮಾಡುತ್ತಿರುವ ಹಾಗೆ ಭ್ರಮೆಯಲ್ಲಿ ಮುಳುಗಿದ್ದಾನೆ.

314. ಪರಮಾತ್ಮ, ಆತ್ಮ, ಜಿವಾತ್ಮಗಳ ವರಸೆ ಕ್ರಮದಲ್ಲಿ ಜೀವಾತ್ಮ ಕೊನೆಯದಾದರು, ಮೊದಲನೆಯದೆನ್ನುವಂತೆ ಭ್ರಮಿಸುತ್ತಿರುವುದು.

315. ಪ್ರತಿ ಮಾನವನ ಹಸ್ತದಲ್ಲಿ ಜೀವಾತ್ಮ ಆತ್ಮ ಎನ್ನುವ ರೇಖೆಗಳು ಬೆರೆತಿರುವಹಾಗೆ, ಆ ಎರಡರ ಮೇಲೆ ಪರಮಾತ್ಮ ಎನ್ನುವ ರೇಖೆ ಪ್ರತ್ಯೇಕವಾಗಿ ಇರುವಹಾಗೆ ಗರ್ಭದಲ್ಲಿಯೇ ಮುದ್ರಿಸಲ್ಪಟ್ಟಿರುವುದು.

316. ಪರಮಾತ್ಮ ವಿಶ್ವವೆಲ್ಲಾ, ಆತ್ಮ ಶರೀರವೆಲ್ಲಾ, ಜೀವಾತ್ಮ ತಲೆಯಲ್ಲಿನ ಹಣೆಯ ಭಾಗದಲ್ಲಿ ಸೂಜಿ ಮೊನೆಯಷ್ಟು ಮಾತ್ರ ವ್ಯಾಪಿಸಿರುವುದು.

317. ಆತ್ಮ ಜೀವಾತ್ಮಗಳು ಎರಡು ಜೋಡಿ ಆತ್ಮಗಳಾಗಿ ಇರುವವು. ಜೀವಾತ್ಮವನ್ನು ಬಿಟ್ಟು ಆತ್ಮ, ಆತ್ಮವನ್ನು ಬಿಟ್ಟು ಜೀವಾತ್ಮ ಇರಲು ಸಾಧ್ಯವಿಲ್ಲ.

318. ಶರೀರದಲ್ಲಿ ಸೂಜಿ ಬಾಗಿಸಿದಷ್ಟು ಜೀವಾತ್ಮ ಇರುವಾಗ, ಸೂಜಿ ಬಾಗಿಸಿದಷ್ಟುಕೂಡ ಅಗಲವಿಲ್ಲದಹಾಗೆ ಪರಮಾತ್ಮ ವಿಶ್ವವೆಲ್ಲಾ ವ್ಯಾಪಿಸಿ ಇರುವುದು.

319. ಜೀವಾತ್ಮನಿಗೆ ಒಂದೇ ಆಕಾರವಿರುವಾಗ ಆತ್ಮನಿಗೆ ಅನೇಕ ಆಕಾರಗಳಿರುವಾಗ ಪರಮಾತ್ಮನಿಗೆ ಆಕಾರವೇ ಇಲ್ಲ.

320. ಜೀವಾತ್ಮನಿಗೂ ಆತ್ಮನಿಗೂ ಸ್ಥಾನ, ಆಕಾರ, ಹೆಸರು, ಕೆಲಸ ಇರುವಾಗ ಪರಮಾತ್ಮನಿಗೆ ಅವುಯಾವುವೂ ಇಲ್ಲ.

321. ಭೂಮಿಮೇಲೆ ಪ್ರಚಾರವಾದ ಗುಣಗಳು ಆರೇ. ಅವುಗಳನ್ನೇ ಆರು ಶತ್ರುಗುಂಪು (ಅರಿಷಟ್ ವರ್ಗವು) ಎನ್ನುತ್ತಿದ್ದೇವೆ. ಪ್ರಚಾರವಿಲ್ಲದ ಗುಣಗಳು ಮತ್ತೊಂದು ಆರು ಇರುವವು ಅವುಗಳನ್ನೇ ಆರು ಮಿತ್ರಗುಂಪು (ಮೈತ್ರಿ ಷಟ್ವರ್ಗವು) ಎನ್ನುತ್ತೇವೆ. ಮೈತ್ರಿ ಷಟ್ವರ್ಗದ ಗುಣಗಳನ್ನು ಕುರಿತು ಯಾರಿಗೂ ತಿಳಿಯದು. ಅವುಗಳನ್ನು ನಾವೇ (ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರೇ) ಮೊದಲು ಹೇಳಿಕೊಂಡಿದ್ದೇವೆ.

322. ಗುಣಗಳು ಶತ್ರುವರ್ಗವಾಗಿ ಆರು, ಮಿತ್ರವರ್ಗವಾಗಿ ಆರು ಒಟ್ಟಾಗಿ ಹನ್ನೆರಡು ಇರುವವು. ಅವುಗಳ ಪ್ರತಿರೂಪವೇ ಮಾಯೆ.

323. ದೇವರು ಸೃಷ್ಠಿಸಿರುವ ಮಾಯೆ, ಗುಣಗಳ ರೂಪವಾಗಿ ಮನುಷ್ಯರ ತಲೆಯಲ್ಲೇ ಬೇರೂರಿವೆಯೆಂದು ಬಹಳಜನರಿಗೆ ತಿಳಿಯದು.

324. ಪರಮಾತ್ಮ ಪ್ರಪಂಚವೆಲ್ಲಾ, ಆತ್ಮ ದೇಹವೆಲ್ಲಾ ವ್ಯಾಪಿಸಿ ಇದ್ದರೂ, ತಲೆಯೊಳಗೆ ಗುಣರೂಪವಾಗಿ ಒಂದು ಕಡೆಯಿರುವ ಮಾಯೆ, ಜೀವಿಯನ್ನು ತನ್ನ ಕಡೆಗೇ ಸೆಳೆಯುತ್ತಿರುವುದು.

325. ಶರೀರದಲ್ಲಿ ಜೀವಾತ್ಮನಿಗೆ ಕಾವಲಾಗಿ ಜೊತೆಯಾಗಿರುವ ಆತ್ಮ ಬಲಕ್ಕಿಂತಲೂ ಮಾಯಾ ಬಲವು (ಗುಣಗಳು) 108ರಷ್ಟು ಹೆಚ್ಚಾಗಿರುವುದರಿಂದ ಜೀವಾತ್ಮನನ್ನು ತನ್ನ ಕಡೆಗೆ ಸೆಳೆಯುವ ಪಂದ್ಯದಲ್ಲಿ ಶರೀರದಲ್ಲಿನ ಆತ್ಮಕ್ಕಿಂತಲೂ ಮಾಯೆಯೇ ಮುಂಚೂಣೆಯಲ್ಲಿದೆ.

326. ಒಂದರಷ್ಟು ಬಲವಿರುವ ಆತ್ಮ, ನೂರೆಂಟರಷ್ಟು ಬಲಗಳಿರುವ ಗುಣಗಳ ಮುಂದೆ ಸೋತುಹೋಗದೆ ತಪ್ಪದು.

327. ಆತ್ಮ ಮಾರ್ಗವನ್ನು ದೈವ ಮಾರ್ಗವೆಂದು, ಗುಣ ಮಾರ್ಗವನ್ನು ಮಾಯ ಮಾರ್ಗವೆಂದು ಹೇಳಿದವರು, ದೈವಮಾರ್ಗವು ಇಕ್ಕಟ್ಟಿನದೆಂದು, ಮಾಯಮಾರ್ಗವು ವಿಶಾಲವಾದದ್ದೆಂದು ಹೇಳಿದ್ದಾರೆ.

328. ದೈವಮಾರ್ಗವು ನಿನ್ನ ಅಳತೆಯಷ್ಟಿರುವುದು. ಆದ್ದರಿಂದ ಇಕ್ಕಟ್ಟಾಗಿರುವುದು. ಮಾಯಾಮಾರ್ಗವು (ಸಾತಾನ್ ಮಾರ್ಗವು) ನಿನ್ನ ಅಳತೆಗಿಂತಲೂ 108ರಷ್ಟು ಹೆಚ್ಚಾಗಿರುವುದು. ಆದ್ದರಿಂದ ಅದು ವಿಶಾಲವಾಗಿರುವುದು.

329. ಮನುಷ್ಯನಲ್ಲಿ ಗುಣಗಳಿರುವವೆಂದು ಎಲ್ಲರಿಗೂ ತಿಳಿದಿದೆ. ಆದರೆ ಯಾವ ಗುಣವು ಯಾವಾಗ ಹೇಗೆ ಕೆಲಸ ಮಾಡುತ್ತಿರುವುದೋ ಯಾರಿಗೂ ತಿಳಿಯದು. ಆದ್ದರಿಂದ ಕಾಮಕ್ಕೆ ಮೋಹಕ್ಕೆ ವ್ಯತ್ಯಾಸವು ತಿಳಿಯದೆ ಎರಡನ್ನೂ ಒಂದೇ ವಿಧವಾಗಿ ಹೋಲಿಸಿಕೊಳ್ಳುತ್ತಿದ್ದಾರೆ.

330. ಮನುಷ್ಯನಿಗೆ ವಯಸ್ಸು ಬೆಳೆಯುತ್ತಾ ಮುದುಕನಾಗುವ ಸಮಯದಲ್ಲಿ ಶರೀರಬಲವು ಕಡಿಮೆಯಾಗುತ್ತಿರುವುದು. ಆದರೆ ಗುಣಗಳ ಬಲವು ಹೆಚ್ಚಾಗುತ್ತಲೇ ಇರುವುದು. ಆದ್ದರಿಂದ ವೃದ್ಧರಿಗೆ ಗುಣಗಳ ಪ್ರಭಾವವು ಹೆಚ್ಚು.

331. ವೃದ್ಧರು ಯುವಕರಹಾಗೆ ಶರೀರ ಶ್ರಮ (ಕೆಲಸ) ಮಾಡಲಾಗದಿದ್ದರೂ ಯುವಕರಿಗಿಂತಲೂ ಹೆಚ್ಚಾಗಿ ಆಲೋಚಿಸುತ್ತಿರುತ್ತಾರೆ.

332. ಮನುಷ್ಯನಿಗೆ ಶತ್ರುಗಳಂತೆ ಮಿತ್ರರಂತೆ ಇರುವ ಗುಣಗಳನ್ನು ಒಳ್ಳೆಯ ಕೆಟ್ಟ ಗುಣಗಳೆನ್ನುತ್ತಿದ್ದೇವೆ.

333. ಶರೀರದಲ್ಲಿ ಕೆಟ್ಟ ಗುಣಗಳು ಕೆಲಸಮಾಡಿದಹಾಗೆ ಒಳ್ಳೆಯ ಗುಣಗಳು ಕೆಲಸಮಾಡುವುದಿಲ್ಲವೆಂದೇ ಹೇಳಬಹುದು.

334. ಒಳ್ಳೆಯದಾದರು ಕೆಟ್ಟದಾದರು ಎರಡು ಮಾಯೆಯೇ. ಒಳ್ಳೆಯದ್ದು ಕೆಟ್ಟದ್ದು ಅಲ್ಲದಿರುವುದೇ ದೈವವು.

335. ಕೆಟ್ಟ ಗುಣಗಳಿಂದ ಪಾಪವು, ಒಳ್ಳೆಯ ಗುಣಗಳಿಂದ ಪುಣ್ಯವು ಸಂಭವಿಸುವುದು. ಒಳ್ಳೆಯ ಕೆಟ್ಟ ಗುಣಗಳ ಕೆಲಸವಿಲ್ಲದಾಗಲೇ ಕರ್ಮ ಅಂಟದೇಹೋಗುವುದು.

336. ಶರೀರದೊಳಗಿನ ಗುಣಗಳಿಂದಲೇ ಆಲೋಚನೆಗಳು ಬರುತ್ತಿರುವವು. ಆಲೋಚನೆಗಳಿಂದಲೇ ಕೆಲಸವು, ಕೆಲಸಗಳಿಂದಲೇ ಕರ್ಮ ಉಂಟಾಗುತ್ತಿರುವುದು.

337. ಗುಣಗಳಿಂದ ವಿಷಯವು ಮನಸ್ಸಿಗೆ ಜ್ಞಾಪಕಕ್ಕೆ ಬಂದರೆ, ಅದರ ಒಳ್ಳೆಯ ಕೆಟ್ಟವುಗಳನ್ನು ಎರಡು ವಿಧಗಳಾಗಿ ಬುದ್ಧಿ ಯೋಚಿಸುತ್ತಿದ್ದರೆ, ಪ್ರಾರಬ್ಧ ಕರ್ಮ ಪ್ರಕಾರವು ಚಿತ್ತವು ನಿರ್ಣಯಿಸುತ್ತಿದ್ದರೆ, ಆ ವಿಧವಾಗಿಯೇ ಇಂದ್ರಿಯಗಳು ಕೆಲಸಮಾಡುತ್ತಿರುವವು.

338. ಕೆಲಸಗಳಿಂದಾಗಲಿ, ಗುಣಗಳಿಂದಾಗಲಿ ಯಾವ ಸಂಬಂಧವಿಲ್ಲದ

ಅಹಂ ಜೀವಿಯಜೊತೆ ಬೆರೆತು ಎಲ್ಲದಕ್ಕೂ ನಾನೇ ಕರ್ತನೆನ್ನುವಹಾಗೆ ಜೀವಿಯನ್ನು ಭ್ರಮಿಸುವಂತೆ ಮಾಡುತ್ತಿರುವುದು.

339. ಅಹಂ ಎನ್ನುವುದು ಗುಣವಲ್ಲ, ಜೀವಿಗೆ ಅಂಟಿಕೊಂಡಿರುವ ಒಂದುಪೊರೆ.

340. ಅಹಂಗೆ ಶರೀರದಲ್ಲಿ ಪ್ರತ್ಯೇಕವಾದ ಸ್ಥಾನವಿಲ್ಲ. ಅದು ಜೀವಿಯೊಳಗಿನ ಒಂದು ಭಾಗವೇ.

341. ಅಹಂ ಬುದ್ಧಿಗೆ ಚಿತ್ತಕ್ಕೆ ಆನಿಸಿಕೊಂಡು ಅದರ ಹಿಂದೆಯಿದೆ. ಆದ್ದರಿಂದ ಬುದ್ಧಿ ಯೋಚಿಸಿರುವುದನ್ನು, ಚಿತ್ತವು ನಿರ್ಣಯಿಸಿರುವುದನ್ನು ನೀನೇ ನಿರ್ಣಯಿಸಿರುವೆ, ನೀನೇ ಯೋಚಿಸಿರುವೆಯೆಂದು ಜೀವಿಗೆ (ಜೀವಾತ್ಮಗೆ) ತಿಳಿಸಿರುವುದರಿಂದ ಎಲ್ಲಾ ನಾನೇ ಅಂದುಕೊಂಡ ಜೀವಾತ್ಮ ಎಲ್ಲಾ ನಾನೇ ಮಾಡುತ್ತಿರುವೆ ಅಂದುಕೊಳ್ಳುತ್ತಿರುವನು.

342. ಶರೀರದೊಳಗಿರುವ 24 ಪ್ರಕೃತಿ ಭಾಗಗಳಲ್ಲಿ ಜೀವಾತ್ಮನನ್ನು ಅಂಟಿಕೊಂಡಿರುವುದು ಮೂರು ಇರುವವು. ಅವುಗಳೇ ಅಹಂ, ಚಿತ್ತ, ಬುದ್ಧಿ.

343. ಅಹಂ ಯಾರಿಗೂ ಅರ್ಥವಾಗದ ಜೀವಿಯ ಸ್ವರೂಪವು. ಆದ್ದರಿಂದ ಹಲವು ಜನರು ಅಹಂಅನ್ನು ಗರ್ವವೆಂದುಕೊಳ್ಳುವುದು ನಡೆಯುತ್ತಿರುವುದು.

344. ಅಹಂಅನ್ನು ಒಂದು ಗುಣವೆಂದುಕೊಳ್ಳುವವರು ಜ್ಞಾನ ಶೂನ್ಯರು.

345. ಶರೀರವು ಸ್ಥೂಲ ಸೂಕ್ಷ್ಮಗಳಾಗಿ ಇರುವುದು. ಎಲ್ಲರಿಗೂ ಸ್ಥೂಲವು ತಿಳಿಯುವುದು ಆದರೆ ಸೂಕ್ಷ್ಮವು ತಿಳಿಯದು.

346. ಸ್ಥೂಲ ಶರೀರವು ಹೊರಗಡೆ ಹತ್ತು ಭಾಗಗಳಾಗಿ ಇದ್ದರೂ ಒಳಗಡೆ ಕಾಣಿಸುವ ಗುಂಡಿಗೆ, ಶ್ವಾಸಕೋಶಗಳು, ಪಿತ್ತಾಶಯವು, ಮೂತ್ರಪಿಂಡಗಳು ಮೊದಲಾದ ಅವಯವಗಳೆಷ್ಟೋ ಇರುವುದು.

347. ಸೂಕ್ಷ್ಮ ಶರೀರವು 15 ಭಾಗಗಳಾಗಿದ್ದರೂ ಒಳಗಡೆ ಕಾಣಿಸದ ಗುಣಗಳು, ಕರ್ಮಗಳು ಮೊದಲಾದವುಗಳೆಷ್ಟೋ ಒಳಗೊಂಡಿರುವುದು.

348. ಜೀವಿಯು ಜೀವಿಸುವ ಶರೀರವು ಸ್ಥೂಲ ಸೂಕ್ಷ್ಮಗಳಾಗಿ ಲೆಕ್ಕಿಸಲ್ಪಟ್ಟಿದ್ದರೂ, ಅವುಗಳಿಗೆ ಅನುಸಂದಾನವಾದವು ಸ್ಥೂಲವಾಗಿ ಸೂಕ್ಷ್ಮವಾಗಿ ಎಷ್ಟೋ ಇರುವುದು.

349. ಭೌತಿಕವಾಗಿ ಶರೀರವೊಂದರ ಹೊರಗಿನ ಒಳಗಿನ ಅವಯವಗಳನ್ನು ತಿಳಿದಿರುವ ವೈದ್ಯರುಗಳಿಗೆ ಸೂಕ್ಷ್ಮವಾಗಿರುವ ಮನೋಬುದ್ಧಿಗಳು ಗುಣಕರ್ಮಗಳ ಬಗ್ಗೆ ಸ್ವಲ್ಪವೂ ಕೂಡ ತಿಳಿಯದು.

350. ಜ್ಞಾನಿ ಎನ್ನುವವನಿಗೆ ಸ್ಥೂಲ ಸೂಕ್ಷ್ಮ ಶರೀರಗಳು ತಿಳಿದಿರಬೇಕು.

351. ದೇವರನ್ನು ತಿಳಿಯಬೇಕಾಗಿರುವುದು ಆರಾಧಿಸಬೇಕಾಗಿರುವುದು ಶರೀರದಲ್ಲಿಯೇ ಆದ್ದರಿಂದ ಜ್ಞಾನಿಗಳು ಪೂರ್ತಿ ಶರೀರವನ್ನು ಕುರಿತು ತಿಳಿಯಬೇಕಾಗಿದೆ.

352. ದೇಹದಲ್ಲಿ ನಿವಾಸಿಸುವುದನ್ನು ದೇಹಿ ಎನ್ನುತ್ತೇವೆ. ದೇಹದೊಳಗೆ ತುಂಬಿರುವುದು ಆತ್ಮ, ದೇಹದೊಳಗೆ ಒಂದು ಸ್ಥಾನದಲ್ಲಿರುವುದು ಜೀವಾತ್ಮ.

353. ಆತ್ಮ ಚೈತನ್ಯವಾದದ್ದು ಆದ್ದರಿಂದ ಆತ್ಮ ಶರೀರದಲ್ಲಿ ಇರುವವರೆಗೂ ಶರೀರವು ಕೂಡ ಚೈತನ್ಯವಾಗುತ್ತಿದೆ.

354. ಆತ್ಮ ಬಿಟ್ಟು ಹೋದ ಶರೀರವು ಚೈತನ್ಯವಿಲ್ಲದೇ ಹೋಗುವುದು.

355. ಜೀವಾತ್ಮ ಸ್ವತಹವಾಗಿ ಶರೀರವನ್ನು ಬಿಟ್ಟು ಹೋಗುವುದಾಗಲಿ, ಶರೀರದೊಳಗೆ ಸೇರುವುದಾಗಲಿ ಮಾಡಲಾಗದು.

356. ಜೀವಾತ್ಮನನ್ನು ಶರೀರದೊಳಗೆ ಸೇರಿಸುವುದು ಮತ್ತು ಶರೀರದೊಳಗಿಂದ ಹೊರಗಡೆ ತರುವುದನ್ನು ಆತ್ಮವೇ ಮಾಡುತ್ತಿರುವುದು.

357. ಜೀವಾತ್ಮಗೂ, ಪರಮಾತ್ಮಗೂ ಮಧ್ಯದಲ್ಲಿರುವುದೇ ಆತ್ಮ.

358. ಜೀವಾತ್ಮನಿಗೂ ಆತ್ಮನಿಗೂ, ಆತ್ಮನಿಗೂ ಪರಮಾತ್ಮನಿಗೂ, ಪರಮಾತ್ಮನಿಗೂ ಪ್ರಕೃತಿಗೂ, ಪ್ರಕೃತಿಗೂ ಜೀವಾತ್ಮನಿಗಿರುವ ಸಂಬಂಧಗಳನ್ನು ತಿಳಿಸುವುದೇ ನಿಜವಾದ ದೈವಜ್ಞಾನವು.

359. ಪ್ರಕೃತಿ ಪರಮಾತ್ಮರೇ ಶರೀರಧಾರಿಗಳಾದ ಜೀವಾತ್ಮಗಳಿಗೆ ತಾಯಿ ತಂದೆಯರೆಂದು ತಿಳಿಯುವುದೇ ನಿಜವಾದ ಜ್ಞಾನವು.

360. ಪುರುಷನು ಯಾರೋ, ಪ್ರಕೃತಿ ಯಾವುದೋ ತಿಳಿಯದಿರುವವರೆಗೂ ನೀನು, ನಿನ್ನ ಶರೀರವೂ ನಿನಗೆ ಅರ್ಥವಾಗದು.

361. ಪುರುಷತತ್ವವನ್ನು ತುಂಬಿದವನು ಪರಮಾತ್ಮ, ಸ್ತ್ರೀ ತತ್ವದಿಂದ ತುಂಬಿರುವುದು ಪ್ರಕೃತಿ, ನಪುಂಸಕತ್ವದಿಂದ ತುಂಬಿದವನು ಜೀವಾತ್ಮ ಎಂದು ತಿಳಿಯಬೇಕು.

362. ಪ್ರಕೃತಿಯನ್ನು, ಪುರುಷನನ್ನು, ಕರ್ಮದಿಂದ ಕೂಡಿರುವ ಜೀವಿಯನ್ನು ತಿಳಿಸುವುದಕ್ಕಾಗಿಯೇ, ಭೂಮಿ ಮೇಲೆ ಸ್ತ್ರೀ ಜನ್ಮಗಳು, ಪುರುಷ ಜನ್ಮಗಳು, ನಪುಂಸಕ ಜನ್ಮಗಳು ಉಂಟಾಗುತ್ತಿರುವವು.

363. ಪರಮಾತ್ಮ ಅಂಶವಾದ ಜೀವಿಯು ಪ್ರಕೃತಿ ಅಂಶವಾದ ಶರೀರದಲ್ಲಿ ಕೂಡಿಕೊಂಡಾಗ ಅವನು ನಪುಂಸಕನೇ ಆಗುವನು. ಆ ಲೆಕ್ಕ ಪ್ರಕಾರವು ಆಧ್ಯಾತ್ಮಿಕದ ಪ್ರಕಾರ ನಾವೆಲ್ಲರೂ ನಪುಂಸಕರೇ!

364. ದೈವಜ್ಞಾನವೆಂಬ ಔಷಧಿತಿಂದು, ನಪುಂಸತತ್ತ್ವವನ್ನು ಕಳೆದುಕೊಂಡು, ಪುರುಷತತ್ತ್ವವನ್ನು ಸಂಪಾದಿಸಿಕೊಳ್ಳುವುದೇ ಜೀವಿಯು ದೇವರಾಗಿ ಮಾರ್ಪಡುತ್ತಾನೆಂದು ತಿಳಿಯಿರಿ.

365. ಪದಾರ್ಥಗಳು ಪ್ರಕೃತಿ ಆಗಿರುವಾಗ, ಅಡುಗೆ ಮಾಡುವವನು ಆತ್ಮ ಆಗಿರುವಾಗ, ಮಾಡಿರುವುದನ್ನು ತಿನ್ನುವವನು ಜೀವಾತ್ಮ ಆಗಿರುವಾಗ, ಮಾಡಿಸುವವನು ಪರಮಾತ್ಮ. ಹಾಗಿದ್ದರೂ ಎಲ್ಲಾದಕ್ಕೂ ತಾನೇ ಕರ್ತನೆಂದು ಜೀವಿಯು ತಿಳಿದುಕೊಳ್ಳುತ್ತಿರುವನು.

366. ಪರಮಾತ್ಮ ಸಂಕಲ್ಪ ಮಾಡಿರುವುದರಿಂದಲೇ ಪಂಚಭೂತಗಳಾದ ಪ್ರಪಂಚವು ಮತ್ತು ಸಾವು ಹುಟ್ಟುಗಳು ಇರುವ ಜಗತ್ತು ಉಂಟಾಗಿದೆ.

367. ಎಲ್ಲದಕ್ಕೂ ಆಧಾರವು, ಎಲ್ಲದಕ್ಕೂ ದೊಡ್ಡದು, ಎಲ್ಲದಕ್ಕೂ ಮೂಲವು ಪ್ರಕೃತಿ ಅಲ್ಲ. ಆತ್ಮ, ಜೀವಾತ್ಮಗಳು ಅಲ್ಲ. ಎಲ್ಲವನ್ನು ಆಡಿಸುವುದು ಮಾಯೆ ಆಗಿರುವಾಗ ಮಾಯೆಯನ್ನು ಸಹ ಸಕ್ರಮವಾಗಿ ಆಡಿಸುವವನು ಪರಮಾತ್ಮ. ಆದ್ದರಿಂದ ಎಲ್ಲದಕ್ಕೂ ಆಧಾರವು, ದೊಡ್ಡದು, ಮೂಲವು ಪರಮಾತ್ಮನೇ.

368. ಜೀವಿಯ ದೈವಾರಾಧನೆಗೆ ಮತ್ತು ಶರೀರ ಪೋಷಣೆಗೆ ಯಜ್ಞಗಳು ಮುಖ್ಯವಾದವು.

369. ಶರೀರದಲ್ಲಿ ಎರಡು ವಿಧಗಳ ಯಜ್ಞಗಳು ಮಾಡಬಹುದು. ಅದರಲ್ಲಿ ಒಂದನ್ನು ನಿತ್ಯವೂ ಎಲ್ಲರೂ ಮಾಡುತ್ತಿದ್ದೇವೆ. ಅದರ ಹೆಸರೇ ದ್ರವ್ಯಯಜ್ಞವು.

370. ಶರೀರವು ಎರಡು ವಿಧಗಳ ಯಜ್ಞಗಳಿಗೆ ವೇದಿಕೆಯಾಗಿದೆ. ಹೊಟ್ಟೆಯಲ್ಲಿ ನಡೆಯುವ ದ್ರವ್ಯಯಜ್ಞಕ್ಕಿಂತಲೂ ತಲೆಯಲ್ಲಿ ನಡೆಯುವ ಜ್ಞಾನಯಜ್ಞವು ಶ್ರೇಷ್ಠವಾದದ್ದು.

371. ಯಜ್ಞವು ಎಂದರೆ ಇರುವುದನ್ನು ಇಲ್ಲದಹಾಗೆ ಮಾಡುವುದೆಂದು ಅಥವಾ ಸುಟ್ಟುಹಾಕುವುದೆಂದು ನಿಜಾರ್ಥವು ಬಾಯಿ ಮೂಲಕ ತಿನ್ನುವ ಆಹಾರ ದ್ರವ್ಯಗಳನ್ನು ಹೊಟ್ಟೆಯಲ್ಲಿನ ಜಠರಾಗ್ನಿ ಮೂಲಕ ಸುಟ್ಟುಹಾಕುವುದನ್ನು ದ್ರವ್ಯಯಜ್ಞವೆಂದು ಹೇಳುತ್ತೇವೆ.

372. ಶರೀರದಲ್ಲಿ ನಡೆಯುವ ಯಜ್ಞಗಳಿಗೆ ನಮೂನೆಯಾಗಿ ಮಾಡಿ ತೋರಿಸುವುದೇ ಹೊರಗಿನ ಯಜ್ಞಗಳು. ಯಜ್ಞಗಳಲ್ಲಿ ಅಗ್ನಿ ಮೂಲಕ ಸುಡುವ ವಿಧಾನವೇ ಶರೀರದಲ್ಲಿ ನಡೆಯುವ ಎರಡು ಯಜ್ಞಗಳಲ್ಲಿಯೂ ಇರುವುದು.

373. ಶರೀರದಲ್ಲಿ ನಡೆಯುವ ಜ್ಞಾನ ಯಜ್ಞವು ದ್ರವ್ಯಯಜ್ಞಕ್ಕಿಂತಲೂ ಶ್ರೇಷ್ಠವಾದದ್ದು. ಏಕೆಂದರೆ ಜ್ಞಾನಯಜ್ಞದಲ್ಲಿ ಪ್ರಪಂಚ ಸಂಬಂಧ ಪಂಚ ಜ್ಞಾನಗಳು ಸುಟ್ಟಿಹೋಗುತ್ತಿರುವುದು.

374. ದ್ರವ್ಯಯಜ್ಞದಲ್ಲಿ ನಾಲಕ್ಕು ವಿಧಗಳಾದ ದ್ರವ್ಯಗಳು ಸುಟ್ಟುಹೋಗುತ್ತಿರುವಾಗ ಅವನ್ನು ಸುಡುತ್ತಿರುವುದು ಜಠರಾಗ್ನಿ. ಹಾಗೆಯೇ ಜ್ಞಾನಯಜ್ಞದಲ್ಲಿ ಐದು ವಿಧಗಳಾದ ಇಂದ್ರಿಯ ಜ್ಞಾನಗಳು ಸುಟ್ಟುಹೋಗುತ್ತಿರುವವು. ಅವನ್ನು ಸುಡುವ ಅಗ್ನಿ ಜ್ಞಾನಾಗ್ನಿ.

375. ಶರೀರದಲ್ಲಿ ನಡೆಯುವ ಎರಡು ವಿಧಗಳ ಯಜ್ಞಗಳಲ್ಲಿ ದ್ರವ್ಯಯಜ್ಞವು ಆತ್ಮಕ್ಕೆ ಸಂಬಂಧಿಸಿರುವುದು. ಜ್ಞಾನಯಜ್ಞವು ಜೀವಾತ್ಮಕ್ಕೆ ಸಂಬಂಧಿಸಿರುವುದು.

376. ದ್ರವ್ಯಯಜ್ಞವು ಆತ್ಮಕ್ಕೆ ಉಪಯೋಗವಾಗುವುದು ಆದ್ದರಿಂದ ಆತ್ಮ ದ್ರವ್ಯಯಜ್ಞವನ್ನು ಸಕ್ರಮವಾಗಿ ನೆರವೇರಿಸುತ್ತಿರುವುದು.

377. ಜ್ಞಾನಯಜ್ಞವು ಜೀವಾತ್ಮನಿಗೆ ಉಪಯೋಗವಾಗುವುದು ಆದ್ದರಿಂದ ಜೀವಾತ್ಮ ಜ್ಞಾನಯಜ್ಞ ಮಾಡಬೇಕು. ಆದರೆ ಜೀವಾತ್ಮ ಜ್ಞಾನಯಜ್ಞವನ್ನು ಮಾಡುತ್ತಿಲ್ಲ.

378. ದ್ರವ್ಯಯಜ್ಞವು ಪ್ರತೀ ಜೀವರಾಶಿಯಲ್ಲಿ ನಡೆಯುತ್ತಿರುವಾಗ, ಜ್ಞಾನಯಜ್ಞವನ್ನು ಕೋಟಿಗೊಬ್ಬನೂ ಕೂಡ ಮಾಡುವುದು ಅಪರೂಪವಾಗಿದೆ.

379. ಜ್ಞಾನಿಗಳು, ಸ್ವಾಮಿಗಳು, ಪೀಠಾಧಿಪತಿಗಳು, ಒಳಗಿನ ಜ್ಞಾನಯಜ್ಞವನ್ನು ಕುರಿತು ತಿಳಿಯದೆ, ಹೊರಗಿನ ಅಗ್ನಿಯಿಂದ ಕಡ್ಡಿಗಳನ್ನು ಸುಡುವ ಯಜ್ಞಗಳನ್ನೇ ಮಾಡುತ್ತಿರುವರು.

380. ದ್ರವ್ಯಯಜ್ಞದ ಮೂಲಕ ಸಂಪ್ರಾಪ್ತಿಯಾಗುವುದು ಪಾಪ ಪುಣ್ಯಗಳೆನ್ನುವ ಕರ್ಮಆಗಿರುವಾಗ, ಜ್ಞಾನಯಜ್ಞದ ಮೂಲಕ ಸಂಪ್ರಾಪ್ತಿಯಾಗುವುದು ಪರಮಪದವೆನ್ನುವ ಮೋಕ್ಷವು.

381. ಶರೀರದಲ್ಲಿನ ಐದು ಜ್ಞಾನೇಂದ್ರಿಯಗಳಿಂದ ಸಂಭವಿಸುವುದು ಕರ್ಮ ಆಗಿರುವಾಗ, ಕರ್ಮ ಮೂರು ವಿಧಗಳಾಗಿ ಇರುವುದು.

382. ಪ್ರಾರಬ್ಧ, ಆಗಾಮಿ, ಸಂಚಿತಗಳೆನ್ನುವ ಮೂರು ಕರ್ಮವಿಧಗಳಲ್ಲಿ ಪ್ರಾರಬ್ಧವು ಈ ಜನ್ಮದಲ್ಲಿ ಹುಟ್ಟಿದಾಗಿನಿಂದ ಸಾಯುವವರೆಗೂ ನಡೆಯುವುದು.

383. ಆಗಾಮಿಕರ್ಮ ಎಂದರೆ ಹುಟ್ಟಿದಾಗಿನಿಂದ ಸಾಯುವವರೆಗೂ ಹೊಸದಾಗಿ ಬರುವುದು.

384. ಜೀವನದಲ್ಲಿ ಸಾಧಾರಣ ಮನುಷ್ಯ ಮಾಡುತ್ತಿರುವ ಕೆಲಸದಲ್ಲಿ ಪ್ರಾರಬ್ಧವು ಆಗಾಮಿಕವು ಎರಡಿರುವವು. ಹೇಗೆಂದರೆ ಪ್ರಾರಬ್ಧವು ಅಂತ್ಯವಾಗುತ್ತಿರುವುದು. ಆಗಾಮಿಕವು ತಯಾರಿಯಾಗುತ್ತಿರುವುದು.

385. ಜನ್ಮ ಜನ್ಮಗಳಿಗೂ ಅನುಭವಿಸಿದರೂ ಉಳಿದು ಬರುತ್ತಾ ಕುಪ್ಪೆಯಂತೆ ಬೆಳೆದುಕೊಂಡು ಹೋಗುತ್ತಿರುವುದು ಸಂಚಿತವು.

386. ಶಾಸ್ತ್ರಗಳು ಆರು, ಪುರಾಣಗಳು ಹದಿನೆಂಟು ಆಗಿರುವಾಗ ಅಜ್ಞಾನಿಗಳು ಭಕ್ತಿಮಾರ್ಗವನ್ನು ಪ್ರವೇಶಿಸುವುದಕ್ಕೆ ಉಪಯೋಗಪಡುವವು ಪುರಾಣಗಳು, ಜ್ಞಾನಿಗಳು ಮೋಕ್ಷಮಾರ್ಗವನ್ನು ಪ್ರವೇಶಿಸುವುದಕ್ಕೆ ಉಪಯೋಗಪಡುವವು ಶಾಸ್ತ್ರಗಳು.

387. ಹದಿನೆಂಟು ಪುರಾಣಗಳಲ್ಲಿ ಭಕ್ತಿಗೆ ಭಾಗವತವು ಮುಖ್ಯವು ಆಗಿರುವಾಗ, ಆರು ಶಾಸ್ತ್ರಗಳಲ್ಲಿ ದೈವಜ್ಞಾನಕ್ಕೆ ಮುಖ್ಯವಾಗಿರುವುದು ಯೋಗಶಾಸ್ತ್ರವು.

388. ನೂರಕ್ಕೆ ನೂರುಪಾಲು ಯೋಗಶಾಸ್ತ್ರವಾಗಿರುವುದು ಭಗವಂತನು ಹೇಳಿದ ಭಗವದ್ಗೀತೆಯೇ.

389. ಪುರಾಣವು ಪುಕ್ಕಿಡಿ (ಬಾಯಿದಂತ) ಯಿಂದ, ಶಾಸ್ತ್ರವು ಒಕ್ಕಳು ಹತ್ತಿರದಿಂದ ಬಂದಿರುವವೆಂಬ ನಾಣ್ನುಡಿ ಇರುವುದು. ಆದ್ದರಿಂದ ಅಸತ್ಯಗಳಿಂದ ಕೂಡಿಕೊಂಡಿರುವುದು ಪುರಾಣವು. ಸತ್ಯಗಳಿಂದ ಕೂಡಿಕೊಂಡಿರುವುದು ಶಾಸ್ತ್ರವು ಎಂದು ಹೇಳಬಹುದು.

390. ಶಾಸನಗಳಿಂದ ಕೂಡಿಕೊಂಡಿರುವುದು ಶಾಸ್ತ್ರವು, ಕಲ್ಪನೆಗಳಿಂದ ಕೂಡಿಕೊಂಡಿರುವುದು ಪುರಾಣವು.

391. ವಿಷಯವನ್ನು ಮನನವು (ಜ್ಞಾಪಕವು) ಮಾಡುವುದು ಮನಸ್ಸು.

392. ಮನಸ್ಸನ್ನು ಚಂಚಲವಾದ ನಾಯಿಗೆ, ನೀಚವಾದ ಹಂದಿಗೆ, ಬಲವಾದ ಆನೆಗೆ ಹೋಲಿಸಿ ಕೆಲವರು ಹಿರಿಯರು ಹೇಳಿರುವರು. ಆದ್ದರಿಂದ ಮನಸ್ಸು ಒಂದು ವಿಷಯದ ಮೇಲೆ ನಿಲುಗಡೆ ಇಲ್ಲದ್ದು. ನೀಚಾತಿ ನೀಚವಾದ ವಿಷಯಗಳನ್ನು ಆಲೋಚಿಸುವುದು, ಮತ್ತು ಹತೋಟಿ ಯಲ್ಲಿಟ್ಟುಕೊಳ್ಳ ಬೇಕೆನ್ನುವವನಿಗೆ ಸ್ವಾಧೀನವಾಗದಂತಹ ಬಲವುಳ್ಳದ್ದು.

393. ಮನಸ್ಸು ಎಚ್ಚರಿಕೆಯಲ್ಲಿ ಒಂದು ಆಕಾರವನ್ನು, ನಿದ್ದೆಯಲ್ಲಿ ಮತ್ತೊಂದು ಆಕಾರವನ್ನು ಹೊಂದಿರುವುದು.

394. ಎಚ್ಚರಿಕೆಯಲ್ಲಿ ಶರೀರಾಕೃತಿಯನ್ನು ಹೋಲಿದ ಮನಸ್ಸು ನಿದ್ರೆಯಲ್ಲಿ ಧೂಳಿನ ಕಣದಷ್ಟಾಗಿ ಹೋಗುತ್ತಿರುವುದು.

395. ಮನಸ್ಸು ಅಜ್ಞಾನಿಗಳಿಗಿಂತಲೂ ಸಾಧನೆಮಾಡುವವರಲ್ಲಿ ಹೆಚ್ಚು ವೇಗವಾಗಿ ಚಲಿಸುತ್ತಿರುತ್ತದೆ.

396. ಶರೀರದಲ್ಲಿ ಮನಸ್ಸು ಎರಡು ವಿಧಗಳಾಗಿ ಕೆಲಸ ಮಾಡುತ್ತಿರುವುದು. ಒಂದು ವಿಷಯಗಳನ್ನು ಜ್ಞಾಪಕ ತರುವುದು, ಎರಡು ಬುದ್ಧಿ ಹೇಳಿದ್ದನ್ನು ಹೊರಗಿನ ಇಂದ್ರಿಯಗಳಿಗೆ ಸೇರಿಸುವುದು, ಹೊರಗಿನ ಇಂದ್ರಿಯಗಳು ಹೇಳಿದ್ದನ್ನು ಒಳಗಿನ ಬುದ್ಧಿಗೆ ತಿಳಿಸುವುದು.

397. ಮನುಷ್ಯನಿಗೆ ನಿದ್ರೆ ಎಚ್ಚರಿಕೆಗಳು ಮನಸ್ಸಿನ ಆಧಾರವಾಗಿಯೇ ಇರುವವು. ಶರೀರವೆಲ್ಲಾ ಮನಸ್ಸು ವ್ಯಾಪಿಸಿದಾಗ (ಸೂರ್ಯ ಚಂದ್ರನಾಡಿಗಳಲ್ಲಿ ಇದ್ದಾಗ) ಎಚ್ಚರಿಕೆ ಎಂದು, ಬ್ರಹ್ಮನಾಡಿಗಳಲ್ಲಿ ಅಣಗಿಹೋದಾಗ ನಿದ್ರೆಯೆಂದು ಹೇಳುತ್ತೇವೆ.

398. ಮನುಷ್ಯ ತನ್ನ ಮನಸ್ಸನ್ನು ಜಯಿಸಿದರೇ ಬ್ರಹ್ಮಯೋಗವು (ಜ್ಞಾನ ಯೋಗವು) ಆಗುವುದು.

399. ಮನಸ್ಸಿಗೆ ನೇತ್ರವೂ, ದೃಷ್ಟಿ ಇರುವುದು. ಅದನ್ನೇ ಮನೋನೇತ್ರವೆಂದು ಮನೋದೃಷ್ಟಿ ಎಂದು ಹೇಳುತ್ತಿರುತ್ತೇವೆ.

400. ಮನಸ್ಸಿಗೆ ಕೊನೆಯ ಮರೆವನ್ನೇ ಮರಣ ಎನ್ನುತ್ತೇವೆ.

401. ಮನಸ್ಸಿಗೂ ಬುದ್ಧಿಗೂ, ಬುದ್ಧಿಗೂ ಮನಸ್ಸಿಗೂ ನಿತ್ಯವೂ ಅನುಬಂಧವಿರುವುದು.

402. ಬುದ್ಧಿ ಗುಣಗಳಿಗೆ ಕನ್ನಡಿಯಂತದ್ದು.

403. ಪ್ರತಿ ಗುಣವನ್ನು ಎರಡು ವಿಧಗಳಾಗಿ ಯೋಚಿಸುವುದು ಬುದ್ಧಿ.

404. ಶರೀರದಲ್ಲಿ ಜೀವಿಯಜೊತೆ ಸಂಬಂಧವು ಇರುವುದು, ಕಷ್ಟಸುಖಗಳನ್ನು ತಲುಪಿಸುವುದು ಒಂದು ಬುದ್ಧಿಯೇ.

405. ಶರೀರದಲ್ಲಿ ಎಲ್ಲದಕ್ಕಿಂತಲೂ ದೊಡ್ಡದು ಬುದ್ಧಿಯೇ.

406. ಶರೀರದಲ್ಲಿರುವ ಆತ್ಮ ವಿಷಯವನ್ನು ಜೀವಾತ್ಮನಿಗೆ ತಿಳಿಸುವುದು ಬುದ್ಧಿ ಮಾತ್ರವೇ.

407. ಜೀವಾತ್ಮಗೆ ಅತ್ಯಂತ ಸಮೀಪದಲ್ಲಿರುವುದು ಬುದ್ಧಿ ಮಾತ್ರವೇ.

408. ಬುದ್ಧಿಗೆ ಆಕಾರವಿರುವುದು. ಒಂದೊಂದು ಶರೀರದಲ್ಲಿ ಒಂದೊಂದು ಮಂದವಿರುವ ವೃತ್ತಾಕಾರದ ಪೊರೆಯಾಗಿ ಬುದ್ಧಿಇರುವುದು.

409. ಆಸಕ್ತಿಯ ಆಧಾರವಾಗಿ ಬುದ್ಧಿಯೊಂದರ ಕೆಲಸ ತೀರುವುದು. ಆದ್ದರಿಂದ ಒಂದು ವಿಷಯದಲ್ಲಿ ಕೆಲಸಮಾಡಿದಹಾಗೆ ಮತ್ತೊಂದು ವಿಷಯದಲ್ಲಿ ಕೆಲಸಮಾಡಲಾಗದು.

410. ಮಹಿಮೆ ಇರುವುದೆ ಮಂತ್ರವು. ಆದರೆ ಅದರ ಪೂರ್ತಿ ವಿಧಾನವು ತಿಳಿಯದವರು ಮಂತ್ರಗಳೇ ಇಲ್ಲವೆನ್ನುತ್ತಿದ್ದಾರೆ.

411. ಪ್ರತೀ ಮಾತು ಒಂದು ಮಂತ್ರವೆಂಬ ನಣ್ನುಡಿ ಇರುವುದು. ಆದ್ದರಿಂದ ಉಚ್ಛರಣೆಯನ್ನು ಅನುಸರಿಸಿಯೇ ಮಂತ್ರವು ಮಹಿಮೆ ಇರುವುದಾಗುವುದು.

412. ಮಾತಿನಲ್ಲಿನ ಅಕ್ಷರಗಳ ಆಧಾರವಾಗಿ ಮಂತ್ರದಲ್ಲಿನ ಮಹಿಮೆ ಇರುವುದು. ಮಾತನ್ನು ಕ್ರಮಬದ್ಧಗೊಳಿಸಿದರೆ ಮಂತ್ರವಾಗುವುದು.

413. ಮಂತ್ರಶಕ್ತಿ ಸೂಕ್ಷ್ಮವಾದದ್ದು ಹಾಗಿದ್ದರೂ ಅದು ಸ್ಥೂಲಸೂಕ್ಷ್ಮಗಳ ಎರಡರ ಮೇಲೆ ಕೆಲಸಮಾಡುವುದು.

414. ಕಾಣಿಸುವ ಆನೆಯನ್ನು ಕ್ಷಣದಲ್ಲಿ ಇಲ್ಲದೆ ಮಾಯ ಮಾಡಿದ ಮಾಂತ್ರಿಕನನ್ನು, ಕಾಣಿಸದ ಪ್ರಾಣಿಯನ್ನು ಕ್ಷಣದಲ್ಲಿ ಕಾಣಿಸುವಹಾಗೆ ಮಾಡಿದ ಮಾಂತ್ರಿಕನನ್ನು ನೋಡಿದಾಗ ಆ ಕೆಲಸಗಳು ಮಂತ್ರ ಮಹಿಮೆಗಳಿಂದಲೇ ಎಂದು ಹೇಳದೆ ತಪ್ಪದು.

415. ಧರ್ಮವು ದೈವಸಂಬಂಧವಾದದ್ದು. ದಾನವು ಪ್ರಪಂಚ ಸಂಬಂಧವಾದದ್ದು.

416. ದಾನ ಕೇಳುವ ಪ್ರತಿಯೊಬ್ಬ ಧರ್ಮ ಮಾಡಿರಿ ಎನ್ನುವುದರಲ್ಲಿ ಧರ್ಮವನ್ನು ಆಚರಿಸಿರೆಂದು ಹೇಳುವುದೇ ಆಗುತ್ತಿರುವುದು.

417. ದಾನ ಮಾಡಿದರೆ ಪುಣ್ಯವು ಬರುತ್ತದೆ, ಪುಣ್ಯವು ಬಂದರೆ ಮತ್ತೊಂದು ಜನ್ಮ ಬರುತ್ತದೆ. ಆದ್ದರಿಂದ ದಾನವು ಮಾಡಿದರೆ ನಾನು ತಿಳಿಯನೆಂದು ಗೀತೆಯಲ್ಲಿ ಭಗವಂತನು ಹೇಳಿದ್ದಾನೆ.

418. ಧರ್ಮವು ಮಾಡಿದರೆ ಪುಣ್ಯವು ಬರುವುದಿಲ್ಲ, ಮತ್ತೆ ಜನ್ಮಬರುವುದಿಲ್ಲ. ಆದ್ದರಿಂದ ಧರ್ಮವನ್ನು ಆಚರಿಸಬೇಕೆಂದು ಗೀತೆಯಲ್ಲಿ ಭಗವಂತನು ಹೇಳಿದ್ದಾನೆ.

419. ದಾನಧರ್ಮಗಳ ವ್ಯತ್ಯಾಸವು ತಿಳಿಯದವನು ದೈವಮಾರ್ಗವನ್ನು ತಿಳಿಯಲಾರನು.

420. ಆತ್ಮಕ್ಕಿರುವ ವಿಧಾನಗಳು ಧರ್ಮಗಳು, ದೈವವನ್ನು ತಿಳಿಯುವುದಕ್ಕೆ ಆಚರಿಸಬೇಕಾಗಿರುವುದು ಧರ್ಮಗಳು. ಆದ್ದರಿಂದ ಧರ್ಮಗಳು ಜ್ಞಾನದಿಂದ ಕೂಡಿಕೊಂಡಿರುವವು.

421. ಎಲ್ಲಿ ಅಜ್ಞಾನವಿಧಾನಗಳಿರುವವೋ ಅಲ್ಲಿ ಅಧರ್ಮಗಳಿವೆಯೆಂದು ತಿಳಿಯುತ್ತಿರುವುದು.

422. ಅಣುಅಣುವಲ್ಲಿ ವ್ಯಾಪಿಸಿರುವ ಪರಮಾತ್ಮನನ್ನು ತಿಳಿಯದೆ ಮತ್ತು ಯಾವ ವಿಧಾನವನ್ನು ಆಚರಿಸಿದರೂ, ಯಾವ ದೇವತೆಗಳನ್ನು ಆರಾಧಿಸಿದರೂ ಅದು ಅಧರ್ಮವೇ ಆಗುವುದು.

423. ಭಗವದ್ಗೀತೆಯಲ್ಲಿ ಶರೀರವು ಧರಿಸಿದ ಭಗವಂತನಾಗಿ ಮತ್ತು ಶರೀರವೇ ಇಲ್ಲದ ಪರಮಾತ್ಮನಾಗಿ (ವಿಶ್ವರೂಪದಲ್ಲಿ) ಒಂದು ಮುಖ್ಯವಾದ ಧರ್ಮವನ್ನು ತಿಳಿಸಿರುವನು. ಅದು ಏನೆಂದರೇ! "ಬಾಹ್ಯ ಯಜ್ಞಗಳಿಂದಲೂ, ದಾನಗಳಿಂದಲೂ, ವೇದಾಧ್ಯಾಯನಗಳಿಂದಲೂ, ಉಗ್ರವಾದ ತಪಸ್ಸುಗಳಿಂದಲೂ ನಾನು ತಿಳಿಯಲಾರೆನು" ಎಂದಿರುವನು.

424. ವೇದಪಾರಾಯಣವು, ಯಜ್ಞಗಳು ಮಾಡುವುದು, ದಾನಗಳು, ತಪಸ್ಸುಗಳು ಧರ್ಮಯುಕ್ತಗಳು ಅಲ್ಲವೆಂದು ಭಗವಂತನ ಮಾತುಗಳಲ್ಲಿ ತಿಳಿಯುತ್ತಿರುವುದು.

425. ಕೆಲಸಮಾಡುವ ಪ್ರತಿಯೊಬ್ಬನು ತನ್ನದು ಧರ್ಮವೇ ಎಂದು ಕೊಳ್ಳುತ್ತಿರುವನು. ಅಸಲು ಧರ್ಮವೆಂದರೆ ಏನೋ ಆಲೋಚಿಸಲಿಲ್ಲ.

426. ವೇದಗಳನ್ನು ಹೇಳುವವನು ವೇದಗಳಲ್ಲಿಯೇ ಧರ್ಮಗಳಿರುವುದೆಂದು ಹೇಳುತ್ತಿರುವನು, ಯಜ್ಞಗಳು ಮಾಡುವವನು ಅವುಗಳಲ್ಲಿಯೇ ಧರ್ಮಗಳಿರುವುದೆಂದು ಹೇಳುತ್ತಿರುವನು. ಆದರೆ ದೇವರು ಆ ಮಾತನ್ನು ಹೇಳಲಿಲ್ಲ.

427. ಧರ್ಮಕ್ಕೆ ದೈವಮಾರ್ಗವನ್ನು ತಿಳಿಸುವ ಸಾಮರ್ಥ್ಯವಿರುವುದು. ಧರ್ಮವು ಪವಿತ್ರವಾದದ್ದು, ಆದರೆ ಮಾಯಾ ಪ್ರಭಾವದಿಂದ ಅಧರ್ಮಗಳು ಧರ್ಮಗಳಾಗಿ, ಧರ್ಮಗಳು ಅಧರ್ಮಗಳಾಗಿ ಗೋಚರಿಸುತ್ತಿರುವುದು.

428. ಧರ್ಮಕ್ಕೆ ಆಪತ್ತು ಉಂಟಾದರೆ ಅವುಗಳನ್ನು ದೇವರೇ

ರಕ್ಷಿಸುತ್ತೇನೆಂದಿರುವನು. ಮಾನವನು ಧರ್ಮಗಳನ್ನು ಆಚರಿಸುವುದಕ್ಕೆ ಯೋಗ್ಯನೇ ಹೊರತು ರಕ್ಷಿಸುವುದಕ್ಕೆ ಯೋಗ್ಯನಲ್ಲ.

429. ಧರ್ಮವೆಂದರೆ ಏನೋ ತಿಳಿಯದೇನೆ ಅವುಗಳನ್ನು ಕುರಿತು ವಕ್ರೀಕರಿಸಿ ಹೇಳಿದರೆ ಅದು ದೈವ ವಿರುದ್ಧವಾಗುವುದು.

430. ಧರ್ಮವು ಎಲ್ಲಿರುವುದೋ ಅಧರ್ಮವು ಅಲ್ಲಿಯೇ ಹುಟ್ಟಿರುವುದು. ವೇದಾಂತವು ಎಲ್ಲಿರುವುದೋ ವೇದಗಳು ಅಲ್ಲಿಯೇ ಇರುವವು. ವೇದಾಂತವು ಗುಣಾತೀತವು ಆಗಿರುವಾಗ ವೇದವು ಗುಣಮಯವಾಗಿರುವುದು.

431. ಧರ್ಮಕ್ಕೆ ವಿರುದ್ಧಪದವು ಅಧರ್ಮವಲ್ಲ. ಜ್ಞಾನಕ್ಕೆ ವಿರುದ್ಧಪದವು ಅಜ್ಞಾನವಲ್ಲ.

432. ಧರ್ಮಕ್ಕೆ ವಿರುದ್ಧವು ಗುಣಗಳು, ಜ್ಞಾನಕ್ಕೆ ವಿರುದ್ಧ ಪದವು ಮಾಯೆ, ಪರಮಾತ್ಮಕ್ಕೆ ವಿರುದ್ಧ ಪದವು ಪ್ರಕೃತಿ.

433. ಧರ್ಮವು, ಜ್ಞಾನವು ಪರಮಾತ್ಮಮಯವಾದವುಗಳು. ಗುಣಗಳು, ಮಾಯೆ ಪ್ರಕೃತಿಮಯವಾದವುಗಳು.

434. ಜ್ಞಾನವು ಧರ್ಮಯುಕ್ತವಾದರೆ, ಧರ್ಮವು ಪರಮಾತ್ಮಯುಕ್ತವಾದದ್ದು. ಅನ್ಯ ದೇವತೆಗಳನ್ನು ಕುರಿತು ಬೋಧಿಸುವವರು, ವೇದಗಳನ್ನು ಕುರಿತು ಬೋಧಿಸುವವರು ಪ್ರಕೃತಿಯುಕ್ತರೇ ಆಗುವರು.

435. ಪುರುಷಾರ್ಥಗಳು ನಾಲಕ್ಕೆಂದು ಹೇಳುತ್ತಿರುತ್ತಾರೆ. ಅದು ಅಸತ್ಯವು ಪುರುಷಾರ್ಥಗಳು ಎರಡು ಮಾತ್ರವೇ ಇರುವವು.

436. ಪುರುಷಾರ್ಥಗಳಲ್ಲಿ ಒಂದು ಸ್ಥೂಲ ಅರ್ಥವನ್ನು ಕೊಡುವುದು, ಎರಡನೆಯದು ಸೂಕ್ಷ್ಮಾರ್ಥವನ್ನು ಕೊಡುವುದು.

437. ಕಾಣಿಸುವ ತಂದೆಯನ್ನು ತೋರಿಸುವುದು ತಾಯಿ, ತಾಯಿಯಿಂದಲೇ ತಂದೆ ತಿಳಿಯುವುದು ಅದಕ್ಕೆ ತಾಯಿ–ತಂದೆ ಎನ್ನುವಮಾತು ಒಂದನೆಯದು.

438. ಕಾಣಿಸದ ತಂದೆಯಾದ ದೈವವನ್ನು ತಿಳಿಸುವವನು ಗುರುವು. ಗುರುವುನಿಂದಲೇ ದೈವವು ತಿಳಿಯುವುದು. ಅದಕ್ಕೆ ಗುರುವು-ದೈವವು ಎನ್ನುವ ಮಾತು ಎರಡನೆಯದು.

439. ತಾಯಿ-ತಂದೆ, ಗುರುವು-ದೈವವು ಅರ್ಥ ಕ್ರಮವೇ, ಆದರೆ ವರಸೆ ಕ್ರಮವಲ್ಲ. ಕೆಲವರು ಈ ಮಾತನ್ನು ವಕ್ರೀಕರಿಸಿ ಮೊದಲು ತಾಯಿಯನ್ನು ಪೂಜಿಸಬೇಕೆಂದು, ನಂತರ ತಂದೆಯನ್ನು ಪೂಜಿಸಬೇಕೆಂದು, ನಂತರ ಗುರುವೆಂದು, ಆನಂತರ ದೈವವೆಂದು ಹೇಳುತ್ತಿರುತ್ತಾರೆ.

440. ಸರ್ವ ಪ್ರಪಂಚಕ್ಕೆ ಅಧಿಪತಿ ಆದಿಕರ್ತನಾದ ದೈವವನ್ನು ಕೊನೆಗೆತಳ್ಳಿ, ಕಾಣಿಸುವ ಮನುಷ್ಯರಿಗೆ ಮೊದಲನೆಯ ಪೂಜೆಗಳನ್ನೀಡುವುದು ಅಜ್ಞಾನವಾಗುವುದು.

441. ಅವಧಿ (ಎಲ್ಲೆ) ಇಲ್ಲದ ಪರಮಾತ್ಮನನ್ನು ತಿಳಿಸುವವನು ಅವಧೂತ, ಆದರೆ ಬಜಾರುಗಳಲ್ಲಿ ತಿರುಗುವ ಹುಚ್ಚರು ಅವಧೂತರಲ್ಲ.

442. ಕನಿಷ್ಟ ಪ್ರಪಂಚ ಜ್ಞಾನವು ಕೂಡ ಇಲ್ಲದೆ ಬುದ್ಧಿಕೆಟ್ಟು ಹುಚ್ಚುಹಿಡಿದು ಕೊಳಕಿನಲ್ಲಿ ತಿರುಗುವವರನ್ನು ನೋಡಿ ಪ್ರಜೆಗಳು ಅವರನ್ನು ದೊಡ್ಡ ಮಹಾತ್ಮರಾಗಿ ಭಾವಿಸುತ್ತಿರುವರು. ಅಂತಹವರನ್ನು ಬುದ್ಧಿ ಇರುವ ಹುಚ್ಚರಾಗಿ ಲೆಕ್ಕಿಸಬಹುದು.

443. ಅವಧಿಗಳಿಲ್ಲದ ಪರಮಾತ್ಮ ಸಮಾಚಾರವನ್ನು ತಿಳಿಸುವುದಕ್ಕೆ ಬಂದಿರುವ ದೂತನಂತವನೇ ನಿಜವಾದ ಅವಧೂತ.

444. ಒಂದು ವಿಷಯವನ್ನು ಹೊತ್ತು ಬಂದಿರುವ ಅವನನ್ನು ದೂತ ಎನ್ನುತ್ತೇವೆ. ಎಲ್ಲೆಗಳಿಲ್ಲದ ಪರಮಾತ್ಮ ವಿಷಯವನ್ನು ಹೊತ್ತುಬಂದವನು ನಿಜವಾದ ಗುರುವು. ಅಂತಹವನನ್ನೇ ಅವಧೂತ ಎನ್ನಬಹುದು.

445. ಸಂಪೂರ್ಣ ಪರಮಾತ್ಮ ಜ್ಞಾನವನ್ನು ತಿಳಿದವನು ಗುರುವು ಅಥವಾ ಅವಧೂತ. ಆದರೆ ಯಾವಜ್ಞಾನವು ಇಲ್ಲದ ಹುಚ್ಚನು ಅವಧೂತನಾಗುವುದಿಲ್ಲ.

446. ದೇವರು ಮನುಷ್ಯರನ್ನು ತಯಾರು ಮಾಡಿದ್ದಾನೆ, ಆದರೆ ಕುಲಗಳನ್ನು ತಯಾರು ಮಾಡಲಿಲ್ಲ.

447. ಚಾತುರ್ವರ್ಣಂ ಮಯಾ ಸೃಷ್ಟಮ್ ಎಂದು ಗೀತೆಯಲ್ಲಿ ದೇವರು ಹೇಳಿದ್ದರೆ ನಾಲಕ್ಕು ವರ್ಣಗಳನ್ನು ನಾಲಕ್ಕು ಕುಲಗಳಾಗಿ ಯಾಕೆತಿಳಿದುಕೊಳ್ಳಬೇಕು?

448. ಇತರ ದೇಶಗಳಲ್ಲಿ ಇಲ್ಲದ ಕುಲಗಳು ಈ ದೇಶದಲ್ಲಿಯೇ ಯಾಕಿರುವುದೆಂದರೆ ಉತ್ತರವಿಲ್ಲ.

449. ಗುಣಗಳಿರುವುದು ಮೂರು, ಗುಣಗಳು ಇಲ್ಲದ ಒಂದನ್ನು ಕೂಡಿಸಿ ನಾಲಕ್ಕುವರ್ಣಗಳೆಂದು ದೇವರೆಂದರೆ ಗುಣಗಳಿಗೆ ಸಂಬಂಧವಿಲ್ಲದ ಕುಲಗಳನ್ನು ಮಾನವನು ಇಟ್ಟುಕೊಂಡಿರುವನು.

450. ಹುಟ್ಟುವಿಕೆಯಲ್ಲಿ ಕುಲವಿಲ್ಲ, ಸಾವಿನಲ್ಲಿ ಕುಲವಿಲ್ಲ. ಆದರೆ ಹುಟ್ಟುವಿಕೆಯಲ್ಲಿ ಗುಣವಿದೆ, ಸಾವಿನಲ್ಲಿ ಕೂಡ ಗುಣವಿದೆ.

451. ಯಾವ ಗುಣದಲ್ಲಿ ಮರಣಿಸಿದರೆ ಅದೇ ಗುಣದಲ್ಲಿ ಹುಟ್ಟುತ್ತಿರುವೆಯೆಂದು ಗೀತೆಯಲ್ಲಿ ದೇವರು ಹೇಳಿದ್ದಾನೆ. ಆದರೆ ಯಾವ ಕುಲದಲ್ಲಿ ಮರಣಿಸಿದರೆ ಆ ಕುಲದಲ್ಲಿ ಹುಟ್ಟುವೆಯೆಂದು ಹೇಳಲಿಲ್ಲ.

452. ಹುಟ್ಟಿದ ನಂತರ ಸ್ವಲ್ಪಕಾಲಕ್ಕೆ ತಿಳಿಯುವಂತಹ ಕುಲವು, ಮತವು ಮನುಷ್ಯರು ಕಲ್ಪಿಸಿಕೊಂಡಿರುವವೇ ಆದರೆ ಜನ್ಮತಃ ಬಂದಿರುವುದಲ್ಲ.

453. ಕುಲಗಳು ನಿಷ್ಪ್ರಯೋಜಕತೆಯಿಂದ, ಮತಗಳು ಸ್ವಾರ್ಥದಿಂದ ಕೂಡಿಕೊಂಡಿರುವವು. ಕುಲಗಳಿಗೂ ಮತಗಳಿಗೂ ದೇವರು ಅತೀತವಾಗಿ ಇರುವನೆಂದು ತಿಳಿದು ನೀನು ಆ ವಿಧವಾಗಿ ಬದಲಾದಾಗಲೇ ದೇವರು ತಿಳಿಯುವನು.

454. ಉಪನಿಷತ್ತುಗಳನ್ನು ದೇವರು ಹೇಳಲಿಲ್ಲ. ಮನುಷ್ಯರು ಬರೆದುಕೊಂಡಿರುವವೇ ಉಪನಿಷತ್ತುಗಳು, ಅದರಲ್ಲಿಯೂ ಕೂಡ ಕೆಲವು ಲೋಪಗಳಿರುವುದು.

455. ಉಪನಿಷತ್ತುಗಳಲ್ಲಿಯೂ ಕೂಡ ಇಲ್ಲದ ವಿಷಯಗಳನ್ನು(ಧರ್ಮಗಳನ್ನು) ದೇವರು ತಿಳಿಸಿ ತನ್ನದೇ ದೊಡ್ಡ ಜ್ಞಾನವೆನಿಸಿಕೊಂಡಿರುವನು.

456. ಒಟ್ಟಾಗಿ ಉಪನಿಷತ್ತುಗಳು 1108 ಆಗಿರುವಾಗ ಅವುಗಳಲ್ಲಿ ಮುಖ್ಯವಾಗಿರುವವು 108 ಮಾತ್ರವೇಯೆಂದು ಕೆಲವರೆನ್ನುತ್ತಿರುವರು. ಮುಖ್ಯವಾದ ಆ 108 ಉಪನಿಷತ್ತುಗಳಲ್ಲಿ ಕೂಡ ಭಗವಂತನು ಹೇಳಿದ ಭಗವದ್ಗೀತೆ ಇಲ್ಲ.

457. ದೇವರು ಹೇಳಿದ ಜ್ಞಾನವನ್ನು ಬಿಟ್ಟು ಮನುಷ್ಯರು ಹೇಳಿದ ಉಪನಿಷತ್ತುಗಳ ಮೇಲೆ ಭ್ರಮೆಬೆಳೆಸಿಕೊಳ್ಳುವುದು ನೋಡಿದರೆ ದೈವಜ್ಞಾನದ ಮೇಲೆ ನಂಬಿಕೆಯು ಇಲ್ಲದಹಾಗೆ!

458. ಬಾಹ್ಯದಲ್ಲಿ ಇತರರಿಂದ ಸಂಬಂಧವಿಲ್ಲದೇ ಅನುಭವಿಸಬೇಕಾದ ಕರ್ಮಗಳನ್ನು ಕನಸಿನಲ್ಲಿ ಅನುಭವಿಸುತ್ತಾರೆ.

459. ಬಾಹ್ಯದಲ್ಲಿ ವಿಚಿತ್ರವಾಗಿರುವುದು, ಜರಗುವುದಕ್ಕೆ ಅವಕಾಶವಿಲ್ಲದಿದ್ದರೂ ಜರಗುವ ಅವಸ್ಥೆಯೇ ಸ್ವಪ್ನಾವಸ್ಥೆ.

460. ಮನುಷ್ಯ ಜೀವನದಲ್ಲಿ ಕಾಲಚಲನೆಯು ಹೆಚ್ಚಾಗಿ ಮೂರವಸ್ಥೆಗಳಾಗಿ ನಡೆಯುತ್ತಿರುವುದು. ಅವುಗಳೇ ಒಂದು ಜಾಗ್ರತಾವಸ್ಥೆ, ಎರಡು ಸ್ವಪ್ನಾವಸ್ಥೆ, ಮೂರು ನಿದ್ರಾವಸ್ಥೆ.

461. ಜೀವನದಲ್ಲಿ ಸಾಧಾರಣವಾಗಿ ನಡೆಯುವುದು ಮೂರವಸ್ಥೆಗಳೇ. ಹಾಗಿದ್ದರೂ ಕೆಲವು ಲಕ್ಷರಜನರಲ್ಲಿ ಪ್ರಯತ್ನಿಸುವವರಿಗೆ ಮಾತ್ರವೇ ನಡೆಯುವ ಮತ್ತೊಂದು ಅವಸ್ಥೆ ಇರುವುದು. ಅದುವೇ ಯೋಗಾವಸ್ಥೆ.

462. ನಮ್ಮ ಇಷ್ಟವು ಪ್ರಯತ್ನವು ಇಲ್ಲದೇ ನಡೆಯುವ ಅವಸ್ಥೆಗಳು ನಿದ್ರೆ, ಎಚ್ಚರಿಕೆ, ಸ್ವಪ್ನಗಳು. ನಿನ್ನ ಇಷ್ಟವಿದ್ದರೆ, ನಿನ್ನ ಪ್ರಯತ್ನವಿದ್ದರೆ ಬಹುಅಪರೂಪವಾಗಿ ನಡೆಯುವುದು ಯೋಗಾವಸ್ಥೆ.

463. ಮನುಷ್ಯ ಪ್ರಾರಬ್ಧಕರ್ಮದಿಂದ ನಿನ್ನ ಇಷ್ಟವು ಇಲ್ಲದಿದ್ದರೂ ನಡೆಯುವ

ಅವಸ್ಥೆಗಳು ನಿದ್ದೆ, ಎಚ್ಚರಿಕೆ, ಸ್ವಪ್ನಗಳು. ಪ್ರಾರಬ್ಧಕರ್ಮಕ್ಕೆ ಸಂಬಂಧವಿಲ್ಲದ ನಿನ್ನ ಇಷ್ಟದ ಮೇಲೆ ಆಧಾರಪಟ್ಟಿರುವುದು ಒಂದೇ ಒಂದು ಅವಸ್ಥೆ ಇರುವುದು. ಅದುವೇ ಯೋಗವು.

464. ದೇವರು ತನ್ನನ್ನು ತಿಳಿಸುವುದಕ್ಕೆ ಮನುಷ್ಯರಿಗೆ ಮೂರು ಯೋಗಗಳನ್ನು ತಿಳಿಸಿರುವನು.

465. ಮೂರು ಯೋಗಗಳಲ್ಲಿ ಎರಡು ಧರ್ಮಯುಕ್ತವಾದವು ಇರುವವು. ಇನ್ನೊಂದು ಧರ್ಮಗಳಿಗೆ ಅತೀತವಾದದ್ದು.

466. ಒಂದು ಬ್ರಹ್ಮಯೋಗವು (ಜ್ಞಾನಯೋಗವು), ಎರಡನೆಯದು ಕರ್ಮಯೋಗವು (ರಾಜಯೋಗವು) ಎನ್ನುವವು ಧರ್ಮಯುಕ್ತವಾದವು. ಭಕ್ತಿಯೋಗವು ಮಾತ್ರವೆ ಧರ್ಮಗಳಿಗೂ ಕೂಡ ಅತೀತವಾದದ್ದು.

467. ಓಂಕಾರ ಶಬ್ಧವು ಬಾಯಿಂದ ಹೇಳಿದರೇ ಬರುತ್ತದೆ. ಅದೇ ಶಬ್ಧವು ಬಾಯಿಂದ ಹೇಳದೇನೇ ಸೂಕ್ಷ್ಮವಾಗಿ ಶರೀರದೊಳಗೆ ಪ್ರತಿಧ್ವನಿಸುತ್ತದೆ.

468. ಯಾವ ಮತಕ್ಕೆ ಸೇರಿದ ಮನುಷ್ಯರಲ್ಲಾದರು ಮೂಗಿನರಂಧ್ರಗಳಲ್ಲಿ ಕದಲುವ ಶ್ವಾಸದಲ್ಲಿ "ಓಮ್" ಶಬ್ಧವು ಮಿಳಿತವಾಗಿದೆ.

469. "ಓಮ್" ಒಂದು ಮತಕ್ಕೆ ಸಂಬಂಧಿಸಿರುವುದಲ್ಲ. ಮನುಷ್ಯರೆಲ್ಲರಿಗೂ, ಜೀವರಾಶಿಗಳೆಲ್ಲದಕ್ಕು ಸಂಬಂಧಿಸಿರುವುದು.

470. ಓಮ್ ಶಬ್ಧಕ್ಕೆ ಶ್ವಾಸ ಕಾರಣ, ಶ್ವಾಸಕ್ಕೆ ಶ್ವಾಸಕೋಶಗಳ ಸಂಕೋಚ ವ್ಯಾಕೋಚಗಳೇ ಕಾರಣ, ಶ್ವಾಸಕೋಶಗಳ ಕದಲಿಕೆಗೆ ಶರೀರದ ಮಧ್ಯದಲ್ಲಿರುವ ಬ್ರಹ್ಮನಾಡಿಯ ಸ್ಪಂದನೆಯೇ ಕಾರಣ. ಬ್ರಹ್ಮನಾಡಿಯಲ್ಲಿರುವ ಸ್ಪಂದನೆಗೆ ಅಲ್ಲಿರುವ ಆತ್ಮವೇ ಕಾರಣವಾಗಿರುವುದು.

471. ಇಂದ್ರೀಯಾರ್ಥವಾದ ಶಬ್ಧದಿಂದ ಕೂಡಿ ಮಂತ್ರವಾದ "ಓಂ ನಮಃ ಶಿವಾಯ" ಎನ್ನುವ ಮಂತ್ರವನ್ನು ಪಂಚಾಕ್ಷರಿ ಎನ್ನುತ್ತಿರುವರು.

472. ಪಂಚಾಕ್ಷರಿಯಲ್ಲಿ ಐದು ಅಕ್ಷರಗಳು ಇರುವವೆಂದು ಗುರುತಿಸಬೇಕು. "ಓಂ"ಅನ್ನು ಅಕ್ಷರವಾಗಿ ಗುರುತಿಸಿಕೊಳ್ಳಬಾರದು, ಓಂಅನ್ನು ಬಿಟ್ಟು ಇರುವವು ಐದು ಅಕ್ಷರಗಳೇ ಅಲ್ಲವೆ ಎಂದು ಸಮರ್ಥಿ ಸಿಕೊಳ್ಳುವುದಾದರೆ "ಓಂ ನಮೋನಾರಾಯಣಾಯ" ಎನ್ನುವ ಮಂತ್ರವನ್ನು ಅಷ್ಟಾಕ್ಷರಿ ಮಂತ್ರವೆಂದು ಹೇಳಬಾರದು. ಏಕೆಂದರೆ ಓಂಅನ್ನು ತೆಗೆದುಹಾಕಿ ನೋಡಿದರೆ ಏಳು ಅಕ್ಷರಗಳ ಮಂತ್ರವೇ ಆಗುವುದು.

473. ಅದ್ವೈತರ ಪಂಚಾಕ್ಷರಿಯಲ್ಲೋ, ವಿಶಿಷ್ಟಾದ್ವೈತರ ಅಷ್ಟಾಕ್ಷರಿಯಲ್ಲೋ ಯಾವುದೋ ಒಂದರಲ್ಲಿ ತಪ್ಪಿರುವಹಾಗೆ ತಿಳಿಯುತ್ತಿರುವುದು.

474. ಅದ್ವೈತಕ್ಕೂ, ವಿಶಿಷ್ಟಾದ್ವೈತಕ್ಕೂ, ದ್ವೈತಕ್ಕೂ ಮಿಂಚಿರುವುದು, ಶಾಸ್ತ್ರಬದ್ಧವಾಗಿರುವ **ತ್ರೈತಸಿದ್ಧಾಂತವು**.

475. ವಿಷ್ಣು, ಈಶ್ವರ, ಬ್ರಹ್ಮರಾದ ತ್ರಿಮೂರ್ತಿಗಳಿಗೆ ಕೂಡ ಆಕಾರಗಳು ಹೆಸರುಗಳು ಇರುವವು. ಆಕಾರವಾಗಲಿ, ಹೆಸರಾಗಲಿ ಇಲ್ಲದವನೇ ದೇವರು.

476. ರೂಪನಾಮ ಕ್ರಿಯೆಗಳಿಲ್ಲದ ದೇವರು ರೂಪನಾಮಕ್ರಿಯೆಗಳಿರುವ ತ್ರಿಮೂರ್ತಿಗಳನ್ನು ಕೂಡ ಸೃಷ್ಠಿಸಿದ್ದಾನೆ. ಆದ್ದರಿಂದ ನಮಗೂ ದೇವತೆಗಳಿಗೂ ತಂದೆ ಒಬ್ಬ ದೇವರೇ.

477. ದೇವರ ದೃಷ್ಠಿಯಲ್ಲಿ ದೇವತೆಗಳು, ಮಾನವರು ಎಲ್ಲರೂ ಸಮಾನರೇ. ದೈವಜ್ಞಾನವು ಇಲ್ಲದೇಹೋದರೆ ದೇವತೆಗಳು ಕೂಡ ದೇವರಿಗೆ ದೂರವಾಗಬಲ್ಲರು.

478. ದೇವತೆಗಳಾಗಲಿ, ಮನುಷ್ಯರಾಗಲಿ ಮಹರ್ಷಿ ಪದವಿಯಿಂದ ಬ್ರಹ್ಮರ್ಷಿ ಹುದ್ದೆಯವರೆಗೂ ಹೋದರೇನೆ ಕೊನೆಗೆ ದೇವರು ತಿಳಿಯುವನು.

479. ಜ್ಞಾನವನ್ನು ಅನುಸರಿಸಿ ಮಾನವನಿಗೆ ದೈವಮಾರ್ಗದಲ್ಲಿರುವ ಹುದ್ದೆಗಳು ಮಹರ್ಷಿ, ರಾಜರ್ಷಿ, ದೇವರ್ಷಿ, ಬ್ರಹ್ಮರ್ಷಿ ಆಗಿರುವಾಗ ಅಜ್ಞಾನವನ್ನು ಅನುಸರಿಸಿ ಒಂದೇ ಒಂದು ಪದವಿ ಇರುವುದು. ಅದುವೇ ಬೇವರ್ಷಿ ಎನ್ನುವಹೆಸರು.

480. ಮರಣಗಳು ಎರಡು ವಿಧಗಳು ಒಂದು ಅಕಾಲಮರಣವು, ಎರಡು ಕಾಲಮರಣವು. ಅಕಾಲಮರಣವು ಹೊಂದಿದರೆ ಅದೇ ಜನ್ಮದಲ್ಲಿ ಸೂಕ್ಷ್ಮಶರೀರದಿಂದ ಜೀವಿ(ಜೀವಾತ್ಮ)ಇರುವನು. ಕಾಲಮರಣವು ಹೊಂದಿದರೆ ಹೊಸ ಶರೀರವನ್ನು ಮತ್ತೊಂದು ಜನ್ಮದಲ್ಲಿ ಹೊಂದುವನು.

481. ಭೂಮಿಮೇಲೆ ಮನುಷ್ಯರು ಗ್ರಹಗಳಾಗಿ (ದೆವ್ವಗಳಾಗಿ) ಗುಡಿಯಲ್ಲಿನ ದೇವತೆಗಳು ವಿಗ್ರಹಗಳಾಗಿ ಇರುವರು.

482. ದೇವಾಲಯದ ಪ್ರತಿಮೆಗಳಲ್ಲಿ ದೇವತೆಗಳೆನ್ನುವ ಜೀವಗಳಿರುವಾಗ ಮನುಷ್ಯ ಶರೀರಗಳಲ್ಲಿ ಸಾಧಾರಣ ಜೀವಗಳಿರುವರು.

483. ದೇವಾಲಯದಲ್ಲಿ ಸ್ಥೂಲವಾಗಿರುವ ಪ್ರತಿ ತಿರುವು ಪರಮಾತ್ಮನನ್ನು ತಿಳಿಸುವ ಚಿಹ್ನೆಗಳೆಂದು ತಿಳಿಯದೆ ಅಲ್ಲಿರುವ ದೇವರುಗಳನ್ನು ಪ್ರಜೆಗಳು ಆರಾಧಿಸುತ್ತಾ ದೇವದೇವನಾದ ಪರಮಾತ್ಮನನ್ನು ಗುರುತಿಸಲಾಗದೆ ಹೋಗುತ್ತಿರುವರು.

484. ದೇವಾಲಯಗಳು ಭಾವ ಸಹಿತವಾದ ಕಟ್ಟಡಗಳಾಗಿ, ಪರಮಾತ್ಮ ಜ್ಞಾನವನ್ನು ಬಹಿರ್ಗತ ಮಾಡುವಹಾಗೆ, ಗುರುಬೋಧಕ್ಕೆ ಸಮಾನವಾಗಿರುವಂತೆ ಇರಬೇಕಾಗುತ್ತದೆ.

485. ಪೂರ್ವದಲ್ಲಿ ಹಿರಿಯರಿಂದ ನಿರ್ಮಿಸಲ್ಪಟ್ಟ ದೇವಾಲಯಗಳು ಎರಡೇ. ಅವು ಒಂದು ನಿರಾಕಾರ ಪ್ರತಿಮೆಯಾದ ಲಿಂಗವಿರುವ ಗುಡಿ. ಎರಡನೆಯದು ಆಕಾರದಿಂದ ಕೂಡಿಕೊಂಡಿರುವ ರಂಗನ ಗುಡಿ.

486. ಲಿಂಗದ ಮೇಲೆ ಮೂರು ಆತ್ಮಗಳನ್ನು ಸೂಚಿಸುವ ಮೂರು ವಿಭೂತಿ ರೇಖೆಗಳನ್ನು, ರಂಗನ ಪ್ರತಿಮೆ ಮೇಲೆ ಶರೀರದಲ್ಲಿ ಬ್ರಹ್ಮನಾಡಿಯಲ್ಲಿಯೇ ದೇವರಿರುವನೆಂದು ಸೂಚಿಸುವ ಮೂರುನಾಡಿಗಳ ಗುರುತಾದ ನಾಮವನ್ನು ತಿದ್ದಿ ಅಲಂಕರಿಸಿದ್ದಾರೆ.

487. ಕಾಲಕ್ರಮೇಣವಾಗಿ ಲಿಂಗವು ಶೈವರ ದೇವರೆಂದು, ರಂಗನು ವೈಷ್ಣವರ

ದೇವರೆಂದು ಭಾವಿಸಲ್ಪಟ್ಟು ಇಂದಿಗೂ ಶೈವರ ಆಧೀನದಲ್ಲಿ ಲಿಂಗವು ವೈಷ್ಣವರ ಆಧೀನದಲ್ಲಿ ರಂಗನು ಇರುವನು.

488. ರೂಪವಿಲ್ಲದ ದೇವರು, ರೂಪವಿರುವ ಭಗವಂತನಾಗಿ ಬರುವನೆಂದು ತಿಳಿಸುವುದಕ್ಕೆ ರೂಪವಿಲ್ಲದ ಗುಂಡು ಕಲ್ಲನ್ನು ಲಿಂಗವಾಗಿ, ರೂಪವಿರುವ ರಂಗನನ್ನು ಪ್ರತಿಮೆಯಾಗಿ ಪೂರ್ವವು ತೋರಿಸಿದ್ದಾರೆ.

489. ದೇವರಿಗೆ ಎಲ್ಲರು ಸಂತಾನವೇಯೆಂದು ತಿಳಿಯುವಹಾಗೆ, ವೈವಾಹಿಕ ಜೀವನವೊಂದರ ಅರ್ಥವು ಪ್ರಾರಂಭದಲ್ಲಿಯೇ ತಿಳಿಯುವಹಾಗೆ, ಮದುಮಗಳು ಮದುಮಗನು ಎಂದು ಆ ಸ್ವಲ್ಪ ಸಮಯದಲ್ಲಿ ಕರೆಯುತ್ತೇವೆ.

490. ಮದುವೆ ಜೀವನದಲ್ಲಿ ಒಂದು ದೊಡ್ಡ ಜ್ಞಾನ ಸಂದೇಶವಾದ ಕಾರ್ಯವು. ಮದುವೆಯಲ್ಲಿ ಮಾಡಲಾಗುವ ಪ್ರತಿ ಕಾರ್ಯದಲ್ಲಿಯೂ ವಿಶೇಷವಾದ ಜ್ಞಾನ ಅರ್ಥವು ಕೂಡಿಕೊಂಡಿರುವುದು.

491. ಮದುವೆ ನಡೆದ ನಂತರ ಮದುವೆಯಲ್ಲಿ ಮಾಡಿದ ಕಾರ್ಯಗಳಿಗೆ ಅರ್ಥವು ತಿಳಿಯದೆ, ಅವರ ಜೀವನದಲ್ಲಿ ಜ್ಞಾನವು ತಿಳಿಯದೆ ಪ್ರವರ್ತಿಸಿದರೆ, ಅವರು ಗಂಡಾಹೆಂಡತಿಯರಲ್ಲ. ಅದು ಸ್ತ್ರೀ ಪುರುಷರ ಅಕ್ರಮ ಸಂಬಂಧವಾಗುವುದು. ಮದುವೆ ಕಾರ್ಯಗಳ ಅರ್ಥಗಳಿಗೆ ಅನುಗುಣವಾಗಿ ನಡೆದುಕೊಳ್ಳುವವರೇ ನಿಜವಾದ ಗಂಡಾಹೆಂಡತಿಯರು.

492. ಮದುವೆಯಲ್ಲಿ ತಾಳಿಕಟ್ಟದ ಮೊದಲು ಮದುವೆಗೆ ಮಗನು ಮಗಳಾಗಿ, ಸೋದರಿ ಸೋದರರಾದ ಸ್ತ್ರೀ ಪುರುಷರು ಮದುವೆಯ ನಂತರ ಅವರ ಜ್ಞಾನ ಆಚರಣೆಯಿಂದ ಹೆಂಡತಿ(ಭರಿಸಲ್ಪಡುವವಳು) ಗಂಡ (ಭರಿಸುವವನು) ಸಮಾನವಾದ ಕರ್ತವ್ಯಗಳನ್ನು ಪಡೆದು ಹೆಂಡತಿಗಂಡರು ಆಗಬೇಕು.

493. ಯಮಲೋಕವು ಸ್ವರ್ಗಲೋಕವು ಎರಡು ಮಾನವನ ಜೀವನದಲ್ಲಿ

ಮಿಶ್ರಣವಾಗಿವೆ. ಯಮ ಸ್ವರ್ಗಲೋಕಗಳು ಮೇಲೋ ಕೆಳಗೋ ಇಲ್ಲ. ಎರಡು ಭೂಮಿ ಮೇಲೆಯೇ ಇರುವವು.

494. ಸುಖಗಳ ರೂಪದಲ್ಲಿ ಸ್ವರ್ಗಲೋಕವು, ದುಃಖಗಳ ರೂಪದಲ್ಲಿ ಯಮಲೋಕವು ಇಲ್ಲಿಯೇ ಇರುವವು.

495. ಶರೀರದೊಳಗೆ ಬರುವ ರೋಗವು, ಮನೋ ರೋಗವು ಸ್ವತಃವಾಗಿ ಯಮನು (ಆತ್ಮ) ವಿಧಿಸುವ ಬಾಧೆಗಳೆಂದು, ಶರೀರದ ಹೊರಗಿನಿಂದ ಬರುವ ಬಾಧೆಗಳು ಯಮಕಿಂಕರರು(ಬಂಧುಗಳು, ಶತ್ರುಗಳು)ವಿಧಿಸುವ ಬಾಧೆಗಳೆಂದು ತಿಳಿಯಬೇಕಾಗಿದೆ.

496. ಜೀವನದಲ್ಲಿ ನಡೆಯುವ ದುಃಖಗಳಾಗಲಿ, ಸುಖಗಳಾಗಲಿ ಎಲ್ಲದಕ್ಕೂ ಮೂಲಕಾರಣವು ಶರೀರದಲ್ಲಿರುವ ಕರ್ಮವೇ ಕಾರಣವೆಂದು ತಿಳಿಯಬೇಕು.

497. ಸುಖ ದುಃಖಗಳು ಅನುಭವಿಸುವುದಕ್ಕೆ ಕಾರಣವಾದ ಕರ್ಮ ನಿನ್ನ ತಲೆಯಲ್ಲಿನ ಕರ್ಮಚಕ್ರದಿಂದ ಪ್ರಾರಬ್ಧರೂಪವಾಗಿ ಬರುತ್ತಿರುವುದು. ಹಾಗೆಯೇ ಮಾಡುತ್ತಿರುವ ಕೆಲಸಗಳಲ್ಲಿ ಸಂಭವಿಸುವ ಹೊಸ ಕರ್ಮವಾದ ಆಗಾಮಿಕರ್ಮ ಕರ್ಮಚಕ್ರದಲ್ಲಿಯೇ ಸೇರುತ್ತಿದೆ.

498. ಜೀವನಕ್ಕೇ ಕಾರಣವಾಗಿರುವುದು ಮತ್ತು ಮರಣದಲ್ಲಿ ಶರೀರದಿಂದ ಸೂಕ್ಷ್ಮವಾಗಿ ಹೋಗುತ್ತಾ ಜನನದಲ್ಲಿ ಯಾರಿಗು ಕಾಣಿಸದಂತೆಯೇ ಶರೀರದೊಳಗೆ ಬರುತ್ತಿರುವುದು ಒಂದು ಆಕಾರವಿರುವುದು. ಅದುವೇ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳ ಚೌಕಟ್ಟು. ಈ ನಾಲ್ಕು ಚಕ್ರಗಳಲ್ಲಿಯೇ ಆತ್ಮ, ಜೀವಾತ್ಮ, ಪ್ರಾರಬ್ಧ ಸಂಚಿತ ಕರ್ಮಗಳು, ಕರ್ಮಗಳು ಅನುಭವಿಸುವ ಕಾಲವು, ಆ ಕಾಲದಲ್ಲಿ ಸಂಚರಿಸುವ ನವಗ್ರಹಗಳು ಇರುವವು. ಈ ನಾಲ್ಕು ಚಕ್ರಗಳನ್ನು ತಿಳಿದುಕೊಂಡು ಅದರ ಸ್ಥಾನವಾದ ಹಣೆಯ ಭಾಗದಲ್ಲಿ ಧರಿಸುವುದು ದೊಡ್ಡ ಜ್ಞಾನಸಂದೇಶವಾಗುವುದು.

499. ಸಾಧಾರಣ ಸ್ಥಿತಿಯಲ್ಲಿ ಇರುವವನು ತ್ರೈತದಲ್ಲಿರುವನು. ಜ್ಞಾನಯೋಗದಲ್ಲಿ ಇರುವವನು ದ್ವೈತದಲ್ಲಿರುವನು. ಮೋಕ್ಷವು ಪಡೆದವನು ಅದ್ವೈತದಲ್ಲಿರುವನು.

500. ಅನ್ನದಾನವು ಆತ್ಮಕ್ಕೆ, ಜ್ಞಾನದಾನವು ಜೀವಾತ್ಮಕ್ಕೆ ಸೇರುತ್ತದೆ.

501. ಅನ್ನದಾನವು ಕರ್ಮಕ್ಕೆ ಅನುಗುಣವಾಗಿ ಇರುವುದು. ಜ್ಞಾನದಾನವು ಶ್ರದ್ಧೆಗೆ ಅನುಗುಣವಾಗಿ ಇರುವುದು.

502. ಹಸಿವಿನ ಬಾಧೆಗೆ ಅನ್ನವು ಅವಶ್ಯವಾದಹಾಗೆ, ವಿಷಯಬಾಧೆಗೆ ಜ್ಞಾನವು ಅವಶ್ಯಕ.

503. ಹೊಟ್ಟೆಯಲ್ಲಿ ಹಸಿವಿನಬಾಧೆ ಪ್ರತಿ ಮನುಷ್ಯನಿಗೂ ಇರುವಹಾಗೆ, ತಲೆಯಲ್ಲಿ ವಿಷಯಬಾಧೆ ಪ್ರತಿಮನುಷ್ಯನಿಗೂ ಇರುವುದು.

504. ಹೊಟ್ಟೆಯಿಲ್ಲದ ಜೀವರಾಶಿಯಿಲ್ಲದಹಾಗೆ, ತಲೆಯಿಲ್ಲದ ಜೀವರಾಶಿ ಕೂಡ ಇಲ್ಲ.

505. ಹೊಟ್ಟೆ ತಲೆ ಇರುವರಿಗೆಲ್ಲರಿಗೂ ಆಹಾರವನ್ನು ಜ್ಞಾನವನ್ನು ದೇವರು ತಯಾರಿಮಾಡಿಟ್ಟಿದ್ದಾನೆ.

506. ಮನುಷ್ಯ ಹೊಟ್ಟೆಗಾಗಿ ಅನ್ನವನ್ನೇ ಹುಡುಕಿಕೊಳ್ಳುತ್ತಿರುವನು. ಆದರೆ ತಲೆಗಾಗಿ ಜ್ಞಾನವನ್ನು ಹುಡುಕಿಕೊಳ್ಳುತ್ತಿಲ್ಲ.

507. ರೋಮ (ಕೇಶ) ಗಳು, ಗರಿಗಳಿರುವ ಮನುಷ್ಯರು, ಪಕ್ಷಿಗಳು ಆತ್ಮಕ್ಕೆ ಗುರುತಾಗಿದ್ದರೆ ರೋಮಗಳು, ಗರಿಗಳಿಲ್ಲದ ಹಾವುಗಳು ಮೀನುಗಳು ಮಾಯೆಗೆ ಗುರುತಾಗಿರುವವು.

508. ಮದುವೆ ಎಂದರೆ ದೈವವು ಎಂದು ಅರ್ಥವಾದರೆ, ವಿವಾಹವೆಂದರೆ ಇಬ್ಬರಿಗೂ ಅನ್ವಯಿಸುವುದೆಂದು ಅರ್ಥವು. ಈ ಅರ್ಥಗಳು ಪ್ರಾಪಂಚಿಕ ನಿಘಂಟಿನಲ್ಲಿರುವುದಿಲ್ಲ. ಕೇವಲ ಪರಮಾತ್ಮನ ಘಂಟಲ್ಲಿ ಇರುವವು.

509. ಘಂಟು ಎಂದರೆ ಮೂಟೆ, ನಿಘಂಟು ಎಂದರೆ ಖಾಲಿ ಮೂಟೆ ಎಂದು ತಿಳಿದುಕೋ!

510. ಒಬ್ಬ ಮನುಷ್ಯನನ್ನು ದೇವರೆಂದು ಹೇಳುತ್ತಿರುತ್ತಾರೆ ಆದರೆ ಮನುಷ್ಯನಲ್ಲಿ ದೇವರಿದ್ದಾನೆಂದು, ದೇವರಲ್ಲಿ ಮನುಷ್ಯನಿದ್ದಾನೆಂದು ಬಹಳ ಜನರಿಗೆ ತಿಳಿದಿಲ್ಲ.

511. ಅಂತ್ಯವಿಲ್ಲದ ಪ್ರಕೃತಿ ಪರಮಾತ್ಮನ ಅಧೀನದಲ್ಲಿರುವುದು. ಹಾಗೆಯೇ ಪ್ರಕೃತಿ ಸ್ವರೂಪವಾದ ಸ್ತ್ರೀ, ಪರಮಾತ್ಮ ಸ್ವರೂಪವಾದ ಪುರುಷನ ಅಧೀನದಲ್ಲಿ ಇರುವುದು ಧರ್ಮವು.

512. ಯಾವ ಸಿದ್ಧಾಂತವಾದರು ಮನುಷ್ಯನೊಳಗೆ ಊಹೆಗೆ ಬಂದಿರುವುದೇ, ಮನುಷ್ಯನೊಳಗೆ ಊಹೆಗೆ ಬರುವಂತೆಮಾಡಿರುವವನೇ ಸಿದ್ಧಾಂತಕರ್ತ. ಹಾಗಿದ್ದಾಗ ಸಿದ್ಧಾಂತಕರ್ತನಾಗಿರುವ ಒಳಗಿನವನನ್ನು ಹೇಳದೇನೆ ಹೊರಗಿನ ಮನುಷ್ಯನ ಹೆಸರು ಹೇಳಿಕೊಳ್ಳುವುದು ಅಧರ್ಮವಲ್ಲವೆ!

513. ಮದುವೆಯೆಂದರೆ ನೂರು ವರ್ಷದ ಫಸಲು ಎನ್ನುತ್ತಾರೆ. ಜೀವನವೆಂದರೆ ಮೂರು ದಿನಗಳ ಸಂತೋಷ ಎನ್ನುತ್ತಾರೆ. ಇದರಿಂದ ಜೀವನಕ್ಕಿಂತಲೂ ಮದುವೆಯೇ ದೊಡ್ಡದೆಂದು ತಿಳಿಯುತ್ತಿದೆ.

514. ನಾಲಿಗೆ ಅಂದರೆ ಭಯವಿಲ್ಲದಿರುವುದೆಂದು ಅರ್ಥವು. ಹಾಗೆಯೇ ನೀನು ಕೂಡ ತಲೆಯಲ್ಲಿನ ನಾಲಿಗೆಯಂತೆ ಇರಬೇಕಾಗುವುದು.

515. ಧನವಿರುವವನು ತನ್ನ ಬಳಿ ಧನವು ಇಲ್ಲವೆಂದು ಹೇಳುವುದು, ಜ್ಞಾನವು ತಿಳಿಯದವನು ತನಗೆ ಜ್ಞಾನವು ತಿಳಿದಿದೆಯೆಂದು ಹೇಳಿಕೊಳ್ಳುವುದು ಸಹಜ.

516. ಊಹೆ ಒಂದು ಬಾರಿ ಮಾತ್ರವೇ ಬರುತ್ತದೆ. ಆಲೋಚನೆ ಅನೇಕ ಬಾರಿ ಬರುತ್ತದೆ.

517. ಊಹೆ ಆತ್ಮದ್ದು, ಆಲೋಚನೆ ಮನಸ್ಸಿನದು. ಮನಸ್ಸು ಊಹಿಸಿದೆಯೆಂದು ಆತ್ಮ ಆಲೋಚಿಸಿದೆಯೆಂದು ಹೇಳಬಾರದು.

518. ಮೊದಲೇ ನಿರ್ಣಯಿಸಿಕೊಳ್ಳುವುದನ್ನು "ಪಥಕವು" ಎನ್ನುತ್ತೇವೆ.

ಹುಟ್ಟಿದಾಗ ನಿರ್ಣಯಿಸಲ್ಪಟ್ಟಿರುವುದನ್ನು "ಜಾಪಥಕವು" ಎನ್ನುತ್ತೇವೆ. ಜಾಪಥಕವು ಎನ್ನುವುದೇ ಈಗ ಜಾತಕವು ಎನ್ನುವ ಹೆಸರಲ್ಲಿರುವುದು.

519. ಅದ್ವೈತರು ವಿಶಿಷ್ಟಾದ್ವೈತರು, ದ್ವೈತರು ಆತ್ಮನನ್ನು ಮರೆತರು. ಪರಮಾತ್ಮನನ್ನು ಜೀವಾತ್ಮನನ್ನು ಕುರಿತೇ ಮಾತನಾಡಿದರು.

520. ಪರಮಾತ್ಮನೂ ಜೀವಾತ್ಮನೂ ಅಲ್ಲದೆ, ಆತ್ಮ ಕೂಡ ಒಂದು ಇರುವುದೆಂದು ಹೇಳಿರುವುದು ಒಂದೇಒಂದು ತ್ರೈತಸಿದ್ಧಾಂತವು.

521. ಅದ್ವೈತರು ಪರಮಾತ್ಮನನ್ನು ಮಾತ್ರವೇ ಹೇಳಿದರೆ ವಿಶಿಷ್ಟಾದ್ವೈತರು ಪರಮಾತ್ಮನನ್ನು ಸ್ವಲ್ಪ ವಿಶಿಷ್ಟವಾಗಿ ಹೇಳಿದ್ದಾರೆ. ದ್ವೈತರು ಪರಮಾತ್ಮನನ್ನು ಜೀವಾತ್ಮನನ್ನು ಕುರಿತು ಹೇಳಿದ್ದಾರೆ.

522. ಆತ್ಮವನ್ನು ಕುರಿತು ಪ್ರತ್ಯೇಕವಾಗಿ ಹೇಳಿರುವುದು ತ್ರೈತಸಿದ್ಧಾಂತವು ಒಂದೇ.

523. ಒಂದೇ ಪರಮಾತ್ಮನನ್ನು ಕುರಿತು ಹೇಳಿದವರು ಅದ್ವೈತರು, ವಿಶಿಷ್ಟಾದ್ವೈತರು ಆಗಿರುವಾಗ, ಪರಮಾತ್ಮ, ಜೀವಾತ್ಮ ಎಂಬ ಇಬ್ಬರನ್ನು ಹೇಳಿದವರು ದ್ವೈತರು ಆಗಿರುವಾಗ, ಪರಮಾತ್ಮನೂ, ಜೀವಾತ್ಮನೂ, ಆತ್ಮನೂ, ಮೂವರನ್ನು ಕುರಿತು ಹೇಳಿದವರು ತ್ರೈತರು.

524. ಅವಧಿಯಿಲ್ಲದ ಸಮಾಚಾರವನ್ನು ಹೊತ್ತುಬಂದವನು ಅವಧೂತ ಒಬ್ಬನೇ. ಅತನು ಯಾವಾಗಲೋ ಒಂದುಬಾರಿ ಭೂಮಿಮೇಲೆ ಬರುತ್ತಾನೆ. ಆತನೇ ಭಗವಂತನು.

525. ತಾಮಸರು, ರಾಜಸರು, ಸಾತ್ವಿಕರು, ಯೋಗಿಗಳೆಂದು ಮನುಷ್ಯರನ್ನು ನಾಲ್ಕು ಭಾಗಗಳಾಗಿ ಗೀತೆಯಲ್ಲಿ ಭಗವಂತನು ತೋರಿಸಿರುವಾಗ, ಅದೇ ಮನುಷ್ಯರು ಅಜ್ಞಾನಿಗಳಾಗಿ, ಜ್ಞಾನಿಗಳಾಗಿ, ಯೋಗಿಗಳಾಗಿ, ಭಗವಂತನಾಗಿ ನಾಲ್ಕುವಿಧಗಳಾಗಿ ಇದ್ದಾರೆಂದು **ತ್ರೈತಸಿದ್ಧಾಂತ ಆದಿಕರ್ತ** ತಿಳಿಸುತ್ತಿರುವನು.

526. ಗುಣಗಳಲ್ಲಿರುವ ಅರಿಷಟ್‌ವರ್ಗಗಳಲ್ಲಿನ ಮೊದಲ ಆಸೆ ಕೊನೆಯ ಅಸೂಯೆ ಎರಡು ಪ್ರತ್ಯೇಕವಾಗಿ ಮನುಷ್ಯನಲ್ಲಿ ಕೆಲಸಮಾಡುತ್ತಿರುವವು.

527. ಅಂತಃಕರಣಗಳಲ್ಲಿನ ಮೊದಲ ಮನಸ್ಸು ಕೊನೆಯ ಅಹಂ ಎರಡು ಪ್ರತ್ಯೇಕಿಸಿ ಕೆಲಸ ಮಾಡುತ್ತಿರುವವು.

528. ಶರೀರದಲ್ಲಿನ ಮನಸ್ಸನ್ನು ಕುದುರೆಯಾಗಿ, ಅಹಂಅನ್ನು ಕಾಗೆಯಾಗಿ ಹೋಲಿಸಬಹುದು.

529. ಮನದ ವಿಷಯಗಳನ್ನು ಕದುರೆಯನಾಡಿಯಾಗಿ, ಅಹಂಕಾರದ ಕೆಲಸಗಳನ್ನು ಕಾಗೆಯನಾಡಿಯಾಗಿ ಹೇಳಬಹುದು.

530. ಕುದುರೆನಾಡಿಯನ್ನು ಇಲ್ಲದೆ ಮಾಡಿಕೊಂಡರೆ ಬ್ರಹ್ಮಯೋಗವೂ, ಕಾಗೆಯನಾಡಿಯನ್ನು ಇಲ್ಲದೆ ಮಾಡಿಕೊಂಡರೆ ಕರ್ಮಯೋಗವೂ ಲಭ್ಯವಾಗುವುದು.

531. ಆಧ್ಯಾತ್ಮಿಕವೆನ್ನುವುದು ಶರೀರದ ಹೊರಗೆಯಿಲ್ಲ. ಶರೀರದೊಳಗೆಯೇ ಇರುವುದು.

532. ಪಕ್ಷಿ ಹಗಲು ಎಷ್ಟು ತಿರುಗಾಡಿದರೂ ಸಾಯಂಕಾಲಕ್ಕೆ ಮತ್ತೆ ತನ್ನ ಗೂಡನ್ನು ಸೇರಿದಂತೆ, ಮನಸ್ಸು ಎಷ್ಟೋ ವಿಷಯಗಳಲ್ಲಿ ತಿರುಗಿದರೂ ಕೊನೆಗೆ ಮತ್ತೆ ತನ್ನ ಗೂಡಾದ ಬ್ರಹ್ಮನಾಡಿಯನ್ನೇ ಸೇರುವುದು.

533. ನೀನು ಎಲ್ಲರಿಗೂ ಮಾಮನಾಗಬೇಕೆಂದರೆ ಚಂದಮಾಮನಾಗಬೇಕು. ಚಂದಮಾಮನಾಗಬೇಕೆಂದರೆ ದೈವಜ್ಞಾನವು ತಿಳಿಯಬೇಕು.

534. 'ನ' ಅಂದರೆ ಅಲ್ಲ ಎಂದು ಅರ್ಥ. 'ಮಮ್' ಅಂದರೆ ನಾನು ಎಂದು ಅರ್ಥ. 'ನಾಮಮ್' ಅಂದರೆ ನಾನಲ್ಲ ಎಂದು ಅರ್ಥ.

535. 'ಸಂ' ಅಂದರೆ ಜ್ಞಾನವು, 'ಅಂತಕಮ್' ಅಂದರೆ ಎಷ್ಟುಮಾತ್ರವಿಲ್ಲದಿರುವುದು ಎಂದು, ಅಂತ್ಯವಾಗಿಹೋಗಿರುವುದೆಂದು ಅರ್ಥ. ಸಂತಕವು ಅಂದರೆ ಜ್ಞಾನವಿಲ್ಲದಿರುವುದೆಂದು ಅರ್ಥ.

536. 'ದಸ್' ಅಂದರೆ ಹತ್ತು ಎಂದು, 'ಕತ್' ಅಂದರೆ ವಿಷಯಗಳಿಂದ ಕೂಡಿಕೊಂಡಿರುವ ಉತ್ತರವೆಂದು ಅರ್ಥ. 'ದಸ್ ಕತ್' ಅಂದರೆ ಹತ್ತು ವಿಷಯಗಳಿಂದ ಕೂಡಿಕೊಂಡಿರುವುದೆಂದು (ದಶೇಂದ್ರಿಯಗಳ ಸಮಾಚಾರದಿಂದ ಕೂಡಿಕೊಂಡಿರುವುದೆಂದು) ಅರ್ಥ.

537. 'ಸಿಗ್' ಅಂದರೆ ಗುರುತು ಎಂದು, 'ನೇಚರ್' ಅಂದರೆ ಪ್ರಕೃತಿ ಎಂದು ಅರ್ಥ. 'ಸಿಗ್‌ನೇಚರ್' ಅಂದರೆ ಪ್ರಕೃತಿಗೆ ಗುರುತು ಎಂದು ಅರ್ಥ.

538. ಆತ್ಮವನ್ನು ಕುರಿತು ಹೇಳಿಕೊಂಡರೆ ಆಧ್ಯಾತ್ಮಿಕವಾಗುವುದು. ಜೀವಾತ್ಮವನ್ನು ಕುರಿತಾಗಲಿ, ಪರಮಾತ್ಮನನ್ನು ಕುರಿತಾಗಲಿ ಹೇಳಿಕೊಂಡರೆ ಅದು ಆಧ್ಯಾತ್ಮಿಕವಲ್ಲ.

539. ಒಂದೇ ಪರಮಾತ್ಮನನ್ನು ಕುರಿತು ಹೇಳುವ ಅದ್ವೈತರಾಗಲಿ, ವಿಶಿಷ್ಟಾದ್ವೈತರಾಗಲಿ, ಜೀವಾತ್ಮ ಪರಮಾತ್ಮರನ್ನು ಇಬ್ಬರನ್ನು ಕುರಿತು ಹೇಳುವ ದ್ವೈತರಾಗಲಿ, ಆತ್ಮವನ್ನು ಕುರಿತು ಹೇಳದೇನೆ ಆಧ್ಯಾತ್ಮಿಕರು ಆಗಲಾರರು.

540. ಆತ್ಮವನ್ನು ಕುರಿತು ಸವಿವರವಾಗಿ ಹೇಳುತ್ತಿರುವ ತ್ರೈತರು ಮಾತ್ರವೇ ನಿಜವಾದ ಆಧ್ಯಾತ್ಮಿಕರು.

541. ತಿಳಿಯದೆ ಇರುವುದನ್ನು ತಿಳಿಸುವುದು ಆತ್ಮ ಮಾತ್ರವೇ. ಆದ್ದರಿಂದ ಪರಿಶೋಧನೆ ಆತ್ಮದ್ದೇ! ಸಿದ್ಧಾಂತವೂ ಆತ್ಮದ್ದೇ!!

542. ಈಶ್ವರನು ಎಂದರೆ ಅಧಿಪತಿ ಎಂದು ಅರ್ಥ. ಜೀವೇಶ್ವರನು ಎಂದರೆ ಆತ್ಮ, ಪರಮೇಶ್ವರನು ಎಂದರೆ ಪರಮಾತ್ಮ, ಯಾವ ಈಶ್ವರನಲ್ಲದವನು ಜೀವಾತ್ಮ.

543. ಅಯಮಾತ್ಮ (ತಂದೆಆತ್ಮ) ಬ್ರಹ್ಮ ಎನ್ನುವಮಾತು ಪೂರ್ತಿ ತಪ್ಪು. ನಿನ್ನ ಆತ್ಮ ಆತ್ಮವೇಹೊರೆತು ಬ್ರಹ್ಮವಲ್ಲ.

544. ಅಯಮಾತ್ಮ ಬ್ರಹ್ಮವೆಂದರೆ ಆತ್ಮಕ್ಕಿಂತಲೂ ಬೇರೆಯಾಗಿರುವನೆಂದಿರುವ ಪರಮಾತ್ಮ ಮಾತಿನೊಂದರ ಅರ್ಥವೇ ತಪ್ಪಾಗುವುದು.

545. ನಿನ್ನ ಪಕ್ಕದಲ್ಲಿರುವವನು ಆತ್ಮ, ನಿನ್ನ ಸುತ್ತಾ ಇರುವವನು ಪರಮಾತ್ಮ, ಒಂದುಕಡೆಯಿರುವ ನೀನು ಜೀವಾತ್ಮವು.

546. ನಖ (ಉಗುರುಗಳು), ಶಿಖ (ಜುಟ್ಟು) ಎರಡೂ ಆತ್ಮಕ್ಕೆ ಚಿಹ್ನೆಗಳು, ಮುಖವು ಒಂದು ಜೀವಾತ್ಮಕ್ಕೆ ಗುರುತು.

547. ಭಯವೂ ಧೈರ್ಯವೂ ಎರಡೂ ಶರೀರದಲ್ಲಿಯೇ ಇರುವುದು. ಎರಡೂ ಗುಣಗಳಹಾಗೆಯೇ.

548. ಭಯವನ್ನು ನಿನ್ನ ಶರೀರದೊಳಗೆ ನೀನೆ ಇಲ್ಲದಂತೆ ಮಾಡಿಕೊಳ್ಳಬೇಕು. ಅಷ್ಟೇ ಹೊರೆತು ಹೊರಗಿನ ದೇವತೆಗಳು ನಿನ್ನ ಭಯವನ್ನು ಇಲ್ಲದಂತೆ ಮಾಡಲಾರರು.

549. ಗುಡಿಯಲ್ಲಿ ದೇವತೆಗಳು ಹಸ್ತವನ್ನು ತೋರುವುದು ನಿನ್ನ ಹಸ್ತವನ್ನು ನೀನು ನೋಡಿಕೊಯೆಂದು. ಆದರೆ ಅದು ಅಭಯಹಸ್ತವಲ್ಲ.

550. ವಾಯುವಿನಿಂದ ಕೂಡಿಕೊಂಡಿರುವುದು ಆಯುವು. ಆದ್ದರಿಂದ ವಾಯುವಾದ ಶ್ವಾಸ ಇರುವ ಕಾಲವನ್ನೇ ಆಯುವು ಎನ್ನುತ್ತೇವೆ.

551. ನಿನ್ನ ತಾಯಿ ಪ್ರಕೃತಿ, ನಿನ್ನ ತಂದೆ ಪರಮಾತ್ಮ ನಿನ್ನ ಜೊತೆ ಹುಟ್ಟಿದವರೆಲ್ಲರೂ ಜೀವಿಗಳು. ಆದ್ದರಿಂದ ಎಲ್ಲರೂ ನಿನಗೆ ಸೋದರರು ಸೋದರಿಯರ ಹಾಗೆ ಇರುವರು. ಈ ವಿಷಯವನ್ನೇ ಎಲ್ಲರಿಗೂ ತಿಳಿಯುವ ಹಾಗೆ ಮದುವೆ ದಿನವು ನಿನ್ನನ್ನು ಮದುಮಗನು ಹಾಗೆಯೇ ನಿನ್ನ ಹೆಂಡತಿಯನ್ನು ಮದುಮಗಳು ಎನ್ನುತ್ತಿರುವರು.

552. ಪುಸ್ತಕವು, ಮಸ್ತಕವು (ತಲೆ) ಎರಡು ಸಮಾಚಾರ ನಿಲಯಗಳೇ.

553. ಪುಸ್ತಕದಲ್ಲಿ ಯಾವ ಸಮಾಚಾರವಾದರು ಇರಬಹುದು. ಹಾಗೆಯೇ ಮಸ್ತಕದಲ್ಲಿ ಯಾವ ಸಮಾಚಾರವಾದರು ಇರಬಹುದು.

554. ಪುಸ್ತಕದಲ್ಲಿರುವ ಸಮಾಚಾರದ ಆಧಾರವಾಗಿ ಪ್ರಕೃತಿಗೆ ಸಂಬಂಧಿಸಿರುವುದಾಗಿ, ಪರಮಾತ್ಮನಿಗೆ ಸಂಬಂಧಿಸಿರುವುದಾಗಿ ವಿಂಗಡಿಸಬಹುದು.

555. ಪುಸ್ತಕದಲ್ಲಿರುವ ಸಮಾಚಾರವು ಕಾವ್ಯಗಳಾಗಿ, ಪುರಾಣಗಳಾಗಿ, ಚರಿತ್ರೆಗಳಾಗಿ, ಶಾಸ್ತ್ರಗಳಾಗಿ ಬರೆಯಲ್ಪಟ್ಟಿರುವುದು.

556. ಪುಸ್ತಕದಲ್ಲಿರುವ ವಿಷಯಗಳು ಕೂಡ ತಾಮಸವಾಗಿ, ರಾಜಸವಾಗಿ, ಸಾತ್ವಿಕವಾಗಿ, ಯೋಗವಾಗಿ ಜೋಡಿಸಲ್ಪಟ್ಟಿರುವವು.

557. ಬಾಯಿಂದ ಬರುವಮಾತು ನೀತಿಯಿಂದ (ನ್ಯಾಯದಿಂದ) ಕೂಡಿಕೊಂಡು ಇರಬೇಕೆಂದು, ಹಾಗಾಗದೆಹೋದರೆ ಜ್ಯೋತಿಯಿಂದ (ಜ್ಞಾನದಿಂದ) ಕೂಡಿಕೊಂಡಾದರು ಇರಬೇಕೆಂದಿರುವರು. ಜೀವನದಲ್ಲಿ ಆಕಡೆ ಪ್ರಪಂಚ ನ್ಯಾಯದಲ್ಲಾಗಲಿ, ಈಕಡೆ ದೈವಜ್ಞಾನದಲ್ಲಾಗಲಿ ಖ್ಯಾತಿ ಗಳಿಸಬೇಕೆಂದು ಎಲ್ಲರಿಗೂ ಜ್ಞಾಪಕವಿರುವಹಾಗೆ ಮೂತಿ, ನೀತಿ, ಜ್ಯೋತಿ, ಖ್ಯಾತಿ ಎಂದಿದ್ದಾರೆ.

558. ಸಾವಿನಲ್ಲಿ 24 ಭಾಗಗಳಲ್ಲಿ ಕೂಡಿಕೊಂಡಿರುವ ಶರೀರವು ನಿನ್ನನ್ನು ಬಿಟ್ಟುಹೋಗುತ್ತಿರುವುದು. ಅದುವೇ ವರ್ಧಂತಿ.

559. ಹುಟ್ಟಿನಲ್ಲಿ 24 ಭಾಗಗಳಲ್ಲಿ ಕೂಡಿಕೊಂಡಿರುವ ಶರೀರವು ನಿನಗೆ ತಗುಲಿಕೊಳ್ಳುತ್ತಿರುವುದು. ಅದುವೇ ಜಯಂತಿ.

560. ಸಾವಿನನಂತರ, ಹುಟ್ಟುವಮೊದಲು ನಿನಗೆ ಶರೀರವಿಲ್ಲ. ಆದರೆ ಆಗ ನೀನು, ನಿನ್ನ ಆತ್ಮ, ನಿನ್ನ ಕರ್ಮ, ನಿನ್ನ ಗುಣಗಳು ನಾಲ್ಕುಚಕ್ರಗಳ ಚೌಕಟ್ಟಿನಲ್ಲಿ ಬೆರೆತುಹೋಗಿವೆ.

561. ಆ ಚಕ್ರಗಳ ಚೌಕಟ್ಟು ಬದುಕಿರುವ ಶರೀರದಲ್ಲಿ ಹಣೆಯ ಭಾಗದಲ್ಲಿ ಪ್ರತಿಷ್ಠಿಸಲ್ಪಟ್ಟಿದೆ.

562. ನೀನು, ನಿನ್ನ ಆತ್ಮ, ನಿನ್ನ ಕರ್ಮ, ನಿನ್ನ ಗುಣಗಳು ರಹಸ್ಯ ಪ್ರದೇಶದಲ್ಲಿ ರಹಸ್ಯವಾಗಿದೆ. ಯಾರಿಗೂ ತಿಳಿಯದು.

563. ನಿನ್ನಲ್ಲಿರುವ ನಿನ್ನ ರಹಸ್ಯವನ್ನು ತಿಳಿಸುವ ಸಲುವಾಗಿ ತ್ರೈತರು ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳೆನ್ನುವ ನಾಲಕ್ಕುಚಕ್ರಗಳ ಗುರುತನ್ನು ಹಣೆಯ ಮೇಲೆಯೇ ಧರಿಸುತ್ತಿರುವರು.

564. ಬ್ರಹ್ಮ, ಕಾಲ, ಕರ್ಮ ಗುಣಚಕ್ರಗಳ ವಿವರವನ್ನು ತಿಳಿದದಿನವೇ ತನ್ನ ಒಂದು ರಹಸ್ಯವನ್ನು ತಿಳಿಯುವಂತಾಗುವುದು.

565. ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳ ವಿವರವು ತಿಳಿಯದವನು ಯಾವನಾದರು ಅತ್ತ ಆತ್ಮಜ್ಞಾನವಾಗಲಿ, ಇತ್ತ ಜೀವಾತ್ಮ ಜ್ಞಾನವಾಗಲಿ ತಿಳಿಯದವನೇ.

566. ತನ್ನಲ್ಲಿರುವ ನಾಲ್ಕುಚಕ್ರಗಳನ್ನು ತಿಳಿಯದವರು ಅದ್ವೈತರಾಗಲೀ, ವಿಶಿಷ್ಟಾದ್ವೈತರಾಗಲೀ, ದ್ವೈತರಾಗಲೀ ಆತ್ಮಜ್ಞಾನಿಗಳಾಗಲಾರರು.

567. ಮನದ ಯೋಚನೆಗಳು ಎಲ್ಲರಿಗೂ ತಿಳಿಯುತ್ತಿವೆ. ಆದರೆ ಅಹಂಕಾರವು ಯಾರಿಗೂ ತಿಳಿಯದೇ ಕೆಲಸ ಮಾಡುತ್ತಿರುವುದು.

568. ತಿಳಿಯದೇ ಕೆಲಸಮಾಡುವ ಅಹಂಅನ್ನು ಕಪ್ಪನೆಯ ಕಾಗೆಗೆ, ತಿಳಿಯುವಹಾಗೆ ಕೆಲಸಮಾಡುವ ಮನಸ್ಸನ್ನು ಬೆಳ್ಳನೆಯ ಕುದುರೆಗೆ ಹೋಲಿಸಿ ಹೇಳಬಹುದು.

569. ಕಾಗೆಯನ್ನು (ಅಹಂಅನ್ನು) ವಶ ಮಾಡಿಕೊಳ್ಳುವುದನ್ನು ಕರ್ಮಯೋಗವಾಗಿ, ಕುದುರೆಯನ್ನು (ಮನಸ್ಸನ್ನು) ಹಿಡಿತದಲ್ಲಿಟ್ಟು ಕೊಳ್ಳುವುದನ್ನು ಬ್ರಹ್ಮಯೋಗವಾಗಿ ವರ್ಣಿಸಬಹುದು.

570. ಶರೀರದೊಳಗಿನ ಜ್ಞಾನವನ್ನು ತಿಳಿಯದವನು ಎಂದಿಗೂ ದೈವಜ್ಞಾನವನ್ನು ತಿಳಿಯಲಾರನು. ಮೋಕ್ಷವನ್ನು ಪಡೆಯಲಾರನು.

571. ಒಳಗಿನ ಜ್ಞಾನವನ್ನು ತಿಳಿಯದೇನೆ, ಗೌತಮ ಬುದ್ಧನು ಹೊರಗಿನ ಹೆಂಡತಿ ಮಕ್ಕಳನ್ನು ಬಿಟ್ಟುಹಾಕಿ ಹೋದನು.

572. ನಿನ್ನ ಅಣ್ಣ ಆತ್ಮ, ನಿನ್ನ ತಂದೆ ಪರಮಾತ್ಮ ಇರುವುದು ನಿನ್ನ ಶರೀರದಲ್ಲಿಯೇ ಎಂದು ಮರೆಯಬೇಡ.

573. ಭೌತಿಕ ಶಾಸ್ತ್ರವನ್ನು ತಿಳಿದವರಿಗೆ ಶರೀರದಲ್ಲಿನ ಮೂಳೆಗಳು, ಮಾಂಸವು, ಮೆದುಳು, ರಕ್ತವು ಮಾತ್ರವೇ ಕಾಣಿಸುವುದು. ಆದರೆ ಮನಸ್ಸು ಬುದ್ಧಿ, ಚಿತ್ತವು, ಅಹಂ ಎನ್ನುವವು ಎಷ್ಟು ಮಾತ್ರವು ಕಾಣಿಸುವುದಿಲ್ಲ.

574. ಶರೀರದಲ್ಲಿ ಭಾಗಗಳಾದ ಮನಸ್ಸು, ಬುದ್ಧಿ, ಚಿತ್ತವು, ಅಹಂ ಎನ್ನುವವೇ ಯಾರಿಗೂ ಕಾಣಿಸದಂತಿರುವಾಗ, ಶರೀರ ಭಾಗಗಳಲ್ಲದಂತಹ ಜೀವಾತ್ಮ, ಆತ್ಮ, ಪರಮಾತ್ಮ ಹೇಗೆ ಕಾಣಿಸುತ್ತವೆ?

575. ವ್ಯಾಸನು 18 ಪುರಾಣಗಳನ್ನು, 6 ಶಾಸ್ತ್ರಗಳನ್ನು ಬರೆದಿದ್ದಾನೆ. ಆದರೆ ಅವುಗಳಲ್ಲಿ ಕೆಲವನ್ನು ಹೇಳಿ ಬರೆಸಿರುವವನು ವ್ಯಾಸನ ಶರೀರದಲ್ಲಿನ ಆತ್ಮವೆಂದು ತಿಳಿಯಬೇಕಾಗಿದೆ.

576. ವ್ಯಾಸನ ಶರೀರದಲ್ಲಿನ ಆತ್ಮ 18 ಪುರಾಣಗಳನ್ನು, 5 ಶಾಸ್ತ್ರಗಳನ್ನು ಮಾತ್ರವೇ ಬರೆಸಿರುವುದು. ಆರನೆಯ ಶಾಸ್ತ್ರವನ್ನು ಆತ್ಮ ಸ್ವತಃವಾಗಿ ಬರೆಯಲಿಲ್ಲ.

577. ಪರಮಾತ್ಮ ತಿಳಿಸಿದಾಗ ಆತ್ಮ ಗ್ರಹಿಸಿ ಶರೀರದಿಂದ ಅದನ್ನೇ ಬರೆಸಿರುವುದು. ಅದೇ ಆರನೆಯ ಶಾಸ್ತ್ರವಾದ ಬ್ರಹ್ಮವಿದ್ಯಾಶಾಸ್ತ್ರವು.

578. ಆತ್ಮಕ್ಕೆ ಕೂಡ ತಿಳಿಯದ ಆರನೆಯ ಶಾಸ್ತ್ರವನ್ನು ಮನುಷ್ಯ (ಜೀವಾತ್ಮ) ನನಗೆ ತಿಳಿದಿದೆಯೆಂದುಕೊಳ್ಳುವುದು ಅಜ್ಞಾನವು ಅಲ್ಲವಾ?

579. ಆತ್ಮದಿಂದ ತಿಳಿದ ಸಿದ್ಧಾಂತವನ್ನು ನಾನು ಕಂಡುಹಿಡಿದಿರುವೆನೆಂದು ಹೇಳಿಕೊಳ್ಳುವುದು ಅಹಂ ಅಲ್ಲವಾ?

580. ಯಾವ ಸಿದ್ಧಾಂತವಾದರು ಮನುಷ್ಯನದಲ್ಲ, ಅವನಲ್ಲಿನ ಆತ್ಮದ್ದು. ನ್ಯೂಟನ್ ಸಿದ್ಧಾಂತವನ್ನು ನ್ಯೂಟನ್ ಕಂಡುಹಿಡಿಯಲಿಲ್ಲ. ಅವನ ಆತ್ಮ ಹೇಳಿರುವುದು.

581. ಊರು ಎಂದರೆ ಊರುವುದೆಂದು, ಅಥವಾ ಊಟೆ(ಉತ್ಪನ್ನ) ಯಾಗುತ್ತಿರುವುದೆಂದು ಅರ್ಥ. ನಿನ್ನ ಊರು ಯಾವುದೋ ತಿಳಿದಿದೆಯಾ?

582. ಏಳು ಊಟೆಗಳಿರುವುದು ನಿನ್ನ ಊರು. ಏಳು ಊಟೆಗಳಿರುವ ಊರು ನಿನ್ನ ಶರೀರವೇಯೆಂದು ತಿಳಿದುಕೋ.

583. ಶರೀರವೆಂಬ ಊರಲ್ಲಿ 24 ಜನ ಸಹಚರರ ಜೊತೆ ನೀನು ನಿವಾಸಿಸುತ್ತಿರುವೆಯೆಂದು ಮರೆಯಬೇಡ!

584. ಊರಲ್ಲಿ ನೀನಿದ್ದರೂ ಊರೆಲ್ಲಾ ನೀನಿಲ್ಲ. ಊರಿನೊಳಗೆ ಒಂದು ಮನೆಯಲ್ಲಿ ಮಾತ್ರವೇ ನೀನಿರುವೆ. ಆ ಮನೆ ಒಂದೇ ನಿನ್ನದು.

585. ನೀನಿರುವ ಶರೀರವೆಲ್ಲಾ ನಿನ್ನದಲ್ಲ. ಶರೀರದೊಳಗೆ ಒಂದುಕಡೆ ಮಾತ್ರವೇ ನೀನಿರುವೆ. ಆ ಜಾಗ ಮಾತ್ರವೇ ನಿನ್ನದು.

586. ಊರಿಗೆ ಒಬ್ಬ ದೊಡ್ಡವನಿರುತ್ತಾನೆ ಆತನನ್ನು ಈಗ ಸರ್ಪಂಚ್ ಎಂದು, ಪೂರ್ವದಲ್ಲಿ ಪಾಳೇಗಾರ ಎಂದು ಹೇಳುತ್ತಿದ್ದರು. ಹಾಗೆಯೇ ಶರೀರಕ್ಕೂ ಒಬ್ಬ ದೊಡ್ಡವನಿರುವನು. ಅತನೇ ಆತ್ಮ. ಊರನ್ನು ಪೂರ್ವದಲ್ಲಿ ಪಾಳ್ಯ, ಕೊಪ್ಪಲು(ಹಳ್ಳಿ) ಎಂದು ಅದರ ದೊಡ್ಡವರನ್ನು ಪಾಳೇಗಾರ ಎಂದು ಕರೆಯುತ್ತಿದ್ದರು.

587. ಅಪರಾಧಿಯು ತನ್ನ ಕೆಲಸ ಫಲಿತವಾದ ಪಾಪವನ್ನು ಪಡೆದವನು. ರೋಗಸ್ಥನು ತನ್ನ ಪಾಪಫಲಿತವಾದ ಶಿಕ್ಷೆಯನ್ನು ಪಡೆದವನು.

588. ತಪ್ಪು ಏನಾದರು ಅಪರಾಧವು ಆಗುತ್ತದೆ. ಪ್ರಪಂಚದಲ್ಲಿ ಅನ್ಯಾಯವಾಗಿ ಪ್ರವರ್ತಿಸಿದವನು ಯಾವನಾದರು ಅಪರಾಧಿಯೇ ಆಗುತ್ತಾನೆ.

589. ಅಪರಾಧವು ಏನಾದರು ಅದರ ಫಲಿತವು ಪಾಪವೇ ಆಗುತ್ತದೆ. ಪಾಪವು ಏನಾದರು ಅದರ ಫಲಿತವಾಗಿ ಜೀವಿಗೆ ಬಾಧೆ ಉಂಟಾಗುತ್ತಲೇ ಇರುತ್ತದೆ.

590. ನಡೆದುಹೋದ ಕಾಲದಲ್ಲಿನ ಅಪರಾಧಿಯು, ನಡೆಯುತ್ತಿರುವ ಕಾಲದಲ್ಲಿ ರೋಗಸ್ಥನು, ನಡೆಯುತ್ತಿರುವ ಕಾಲದಲ್ಲಿನ ಅಪರಾಧಿಯು, ಮುಂಬರುವ ಕಾಲದಲ್ಲಿ ರೋಗಸ್ಥನು ಆಗುವನು.

591. ಮಾಡುತ್ತಿರುವ ಅಪರಾಧವು ಮುಂದೆಯೇ ಪ್ರಕೃತಿಯಿಂದ ನಿರ್ಣಯವಾದ ವ್ಯವಸ್ಥೆಯಲ್ಲಿನದೇ. ಯಾವನು ಸ್ವತಹವಾಗಿ ಮಾಡಲಿಲ್ಲ.

ಆದರೆ ತಾನೇ ಮಾಡಿರುವೆನೆಂದು ತಿಳಿದುಕೊಳ್ಳುತ್ತಿರುವುದರಿಂದಲೇ ರೋಗವನ್ನು ಪಡೆಯಬೇಕಾಗಿಬಂದಿದೆ.

592. "ಜಾಗ್" ಎಂದರೆ ಜಾಗರೂಕೆಯಾಗಿರುವುದು ಅಥವಾ ಎಚ್ಚರಿಕೆ ಇರುವುದೆಂದು, "ಗತ್" ಎಂದರೆ ಕಳೆದುಹೋಗಿರುವುದೆಂದು ಅರ್ಥ. ಜಾಗ್+ಗತ್=ಜಾಗ್ಗತ್ ಆಗಿದೆ. ಕಾಲಕ್ರಮೇಣವಾಗಿ ರೂಪಾಂತರಗೊಂಡು ಜಾಗ್ರತ್ ಆಗಿದೆ. ಅದನ್ನೇ ಜಾಗ್ರತೆ ಎಂದು ಸಹ ಉಚ್ಚರಿಸುತ್ತಿದ್ದೇವೆ.

593. ಕಳೆದುಹೋಗಿರುವ ಹುಟ್ಟುವಿಕೆಯನ್ನು ಕುರಿತು ನೆನಪಿಸಿಕೊಂಡು, ಬರುವ ಸಾವನ್ನು ಕುರಿತು ಎಚ್ಚರಿಕೆ ಇರಬೇಕಾಗುವುದು.

594. ತನ್ನ ಸಾವನ್ನು ತಾನು ಜ್ಞಾಪಕ ಮಾಡಿಕೊಳ್ಳುವವನು ಜಾಗ್ರತೆ ಇರುವವನು. ತನ್ನ ಸಾವನ್ನು ಮರೆತಿರುವವನು ಅಜಾಗ್ರತೆಯವನು.

595. ನನಗೆ ಎಷ್ಟೋ ಹುಟ್ಟುಗಳು, ಎಷ್ಟೋ ಮರಣಗಳು ಕಳೆದುಹೋಗಿವೆ. ಅವೆಲ್ಲಾ ನನಗೆ ತಿಳಿಯದು. ನನಗೆ ತಿಳಿದಿರುವುದು, ಪ್ರಸ್ತುತವು ನಾನು ಜನ್ಮಿಸಿದ್ದೇನೆ. ಇನ್ನು ಬರುವುದು ಮರಣವೇ. ಅದನ್ನು ಕುರಿತು ನಾನು ಜಾಗ್ರತ್ತೆಯಿಂದಲೇ ಇರುವೆನೆಂದು ಜ್ಞಾನಿ ತಿಳಿದುಕೊಳ್ಳುತ್ತಿರುವನು.

596. ಸ್ತ್ರೀ ಅವಿವಾಹಿತಳಾಗಿ ಇರುವಾಗ ಇಬ್ಬರು ಗಂಡಂದಿರು ಹೊಂದಿರುತ್ತಾಳೆ. ವಿವಾಹವಾದ ನಂತರ ಮೂವರು ಗಂಡಂದಿರು ಹೊಂದಿರುತ್ತಾಳೆ. ಆದ್ದರಿಂದ ಸ್ತ್ರೀಗೆ ಕಾಣಿಸುವ ಗಂಡ ಒಬ್ಬನು, ಕಾಣಿಸದ ಗಂಡಂದಿರು ಇಬ್ಬರು ಇರುವರೆಂದು ಹೇಳಬಹುದು.

597. ಶರೀರದಲ್ಲಿ ಗುಣಗಳು ಬೇರೆ, ಆತ್ಮಬೇರೆಯಾಗಿ ಇರುವವು. ಜೀವಿಯು ಗುಣಗಳನ್ನು ಬಿಟ್ಟಾಗಲೇ ಆತ್ಮ ತಿಳಿಯುವುದು.

598. ಯಾವ ಗುಣದಿಂದಲೂ ಆತ್ಮವನ್ನು ತಿಳಿಯಲಾರೆವು. ಆದ್ದರಿಂದ ಆತ್ಮಜ್ಞಾನಕ್ಕೆ ಪ್ರೇಮ ಎನ್ನುವ ಗುಣವು, ದಯೆ ಎನ್ನುವ ಗುಣವು, ದಾನ ಎನ್ನುವ ಗುಣವು ಇವು ಯಾವುವು ಕೆಲಸಕ್ಕೆ ಬರುವುದಿಲ್ಲ.

599. ಬಹಳಜನರು ಅಹಂಅನ್ನು ಒಂದು ಗುಣವೆಂದು ತಿಳಿದುಕೊಂಡಿರುವರು. ಆದರೆ ಅಹಂ ಗುಣವಲ್ಲ. ಶರೀರದಲ್ಲಿನ ಒಂದು ಭಾಗವೇ ಅಹಂ.

600. ಗುಣಗಳು ಶರೀರದಲ್ಲಿನ ಭಾಗಗಳಲ್ಲ. ಶರೀರದೊಳಗೇ ಶರಿರಕ್ಕೆ ಅತೀತವಾಗಿದ್ದು, ಶರೀರವಲ್ಲದಂತಹ ಬ್ರಹ್ಮ, ಕಾಲ, ಕರ್ಮ, ಗುಣಚಕ್ರಗಳೆನ್ನುವ ನಾಲ್ಕುಚಕ್ರಗಳ ಸಮುದಾಯದಲ್ಲಿ ಕೆಳಗಿರುವ ಗುಣಚಕ್ರದಲ್ಲಿ ಗುಣಗಳಿರುವವು.

601. ಶರೀರವಲ್ಲದ ಗುಣಗಳು ಒಟ್ಟಾಗಿ 36, ಶರೀರದಲ್ಲಿನ ಅಂತಃಕರಣಗಳು ನಾಲಕ್ಕು, ಅವುಗಳಲ್ಲಿ ಅಹಂ ಒಂದು.

602. ಶರೀರ ಅಂತರ್ಭಾಗಗಳಾದ ಅಹಂನಿಂದ ಕರ್ಮಯೋಗವು, ಮನಸ್ಸಿನಿಂದ ಬ್ರಹ್ಮಯೋಗವು, ಬುದ್ಧಿಯಿಂದ ಭಕ್ತಿಯೋಗವು ಉಂಟಾಗುತ್ತಿರುವುದು.

603. ದೇವರಿಗೆ ದಯೆಯಿಲ್ಲ. ದಯವೇ ಅಲ್ಲ ಮತ್ತು ಯಾವ ಗುಣವೂ ಇಲ್ಲ.

604. ದೇವರಿಗೆ ಪ್ರೇಮವಿಲ್ಲ. ಅಸೂಯೆಯಿಲ್ಲ. ಆದರೆ ಇಷ್ಟವಿರುವುದು, ಇಷ್ಟವಿಲ್ಲದಿರುವುದು ಇರುವವು.

605. ಇಷ್ಟವನ್ನು ಪ್ರೇಮ ಎಂದು ಬಹಳಜನರು ಎಂದುಕೊಳ್ಳುತ್ತಾರೆ. ಆದರೆ ಪ್ರೇಮವೇ ಬೇರೆ ಇಷ್ಟವೇ ಬೇರೆ.

606. ಕಾಮವನ್ನು ಮೋಹವನ್ನು ಎರಡನ್ನು ಒಂದೇ ಎಂದುಕೊಳ್ಳುತ್ತಾರೆ. ಆದರೆ ಕಾಮವೇ ಬೇರೆ, ಮೋಹವೇ ಬೇರೆ.

607. ಒಂದು ದೇವರನ್ನು ಹೊಗಳುವುದು ಭಕ್ತಿ, ಜ್ಞಾನವು ಎಂದುಕೊಳ್ಳುತ್ತಾರೆ. ಆದರೆ ಅದು ಭಕ್ತಿ ಆಗಬಹುದು, ಆದರೆ ಜ್ಞಾನವು ಎಷ್ಟುಮಾತ್ರವಲ್ಲ.

608. ಯಾವುದೋ ಒಂದು ದೇವತೆಯನ್ನು ಕುರಿತಾಗಲಿ ದೇವರನ್ನು

ಕುರಿತಾಗಲಿ ಹಾಡುವುದು ಕೀರ್ತನೆ ಆಗುವುದು. ಕೀರ್ತನೆಯೇ ಬೇರೆ, ಧ್ಯಾನವೇ ಬೇರೆ.

609. ಒಬ್ಬರನ್ನು ಕೀರ್ತಿಸುವುದು ಹೊರಗಿನ ಪ್ರಜೆಗಳಿಗೆ ತಿಳಿಯುತ್ತದೆ. ಧ್ಯಾನಿಸುವುದು ಒಳಗಿನ ಆತ್ಮಕ್ಕೆ ಮಾತ್ರವೇ ತಿಳಿಯುತ್ತದೆ.

610. ನೀಚವು, ಉನ್ನತವು ಅವನವನ ಬುದ್ಧಿಗೆ ಅನುಸಾರವಾಗಿ ಇರುತ್ತದೆ. ಹಂದಿಗೆ ಬಚ್ಚಲಗುಣಿ ಉನ್ನತವು, ಅದು ಮನುಷ್ಯನಿಗೆ ನೀಚವು.

611. ಒಬ್ಬನ ಬುದ್ಧಿಗೆ ದೈವಜ್ಞಾನವು ಉನ್ನತವಾಗಿ ಕಾಣಿಸಿದರೆ, ಮತ್ತೊಬ್ಬನ ಬುದ್ಧಿಗೆ ದೈವಜ್ಞಾನವು ನೀಚವಾಗಿ, ಪ್ರಪಂಚ ಜ್ಞಾನವು ಉನ್ನತವಾಗಿ ತೋಚುವುದು.

612. ಒಳಗಿನ ಬುದ್ಧಿ ಬದಲಾದಾಗ ಹೊರಗೆ ನೀಚವು ಉನ್ನತವಾಗಿ ಬದಲಾಗಬಹುದು. ಆಗಲೇ ಮನುಷ್ಯನಿಗೆ ಅಲ್ಲಿಯವರೆಗೂ ನೀಚವಾಗಿ ಕಾಣಿಸಿದ ಜ್ಞಾನವು ಉನ್ನತವಾಗಿ ತೋಚುವುದು.

613. ನೀನು ಹೇಳುವ ಜ್ಞಾನವು ಮತ್ತೊಬ್ಬನಿಗೆ ನೀಚವಾಗಿ ಕಾಣಿಸುತ್ತಿದೆಯೆಂದರೆ, ಅದು ಅವನ ಬುದ್ಧಿಲೋಪವೇ ಎಂದು ಗ್ರಹಿಸಬೇಕು.

614. ಅನ್ನದಿಂದ ಹಸಿವು ತೀರುತ್ತದೆ. ಜ್ಞಾನದಿಂದ ಕರ್ಮವು ತೀರುತ್ತದೆ.

615. ಹಸಿವು ಹೊಟ್ಟೆಯಲ್ಲಿ ಬಾಧೆ ಉಂಟುಮಾಡುತ್ತದೆ. ಕರ್ಮವು ತಲೆಯಲ್ಲಿ ಬಾಧೆ ಉಂಟುಮಾಡುತ್ತದೆ.

616. ಧನಿಕನು ವಸ್ತು ದಾನವನ್ನು ಮಾಡುವುದು, ಜ್ಞಾನಿ ಜ್ಞಾನದಾನವನ್ನು ಮಾಡುವುದು ಒಳ್ಳೆಯದು.

617. ಧನಿಕನು ಜ್ಞಾನದಾನವನ್ನು ಮಾಡುವುದು, ಜ್ಞಾನಿಯು ವಸ್ತುದಾನವನ್ನು ಮಾಡುವುದು ಧರ್ಮವಿರುದ್ಧವು.

618. ಶಾಸ್ತ್ರವನ್ನು ಪುರಾಣವೆನ್ನುವುದು, ಪುರಾಣವನ್ನು ಶಾಸ್ತ್ರವೆನ್ನುವುದು

ಆನೆಯನ್ನು ಇಲಿಯೆಂದು, ಇಲಿಯನ್ನು ಆನೆಯೆಂದು ಹೇಳಿದಂತಿರುತ್ತದೆ.

619. ನಿನಗೆ ಸರಿಹೋಗದಷ್ಟು ಮಾತ್ರಕ್ಕೆ ಒಳ್ಳೆಯದು ಕೆಟ್ಟದಲ್ಲ. ಹಾಗೆಯೆ ನಿನಗೆ ಇಷ್ಟವಾದಷ್ಟುಮಾತ್ರಕ್ಕೆ ಕೆಟ್ಟದ್ದು ಒಳ್ಳೆಯದಲ್ಲ.

620. ಕರ್ಮವೆಂದರೆ ಅಜ್ಞಾನಿಗಳಿಗೆ ಅರ್ಥವಾಗುವುದಿಲ್ಲ. ಕರ್ಮವಿಲ್ಲದೇ ಯಾರಿಗೂ ಕ್ಷಣವೂ ಕೂಡ ನಡೆಯದು.

621. ಕ್ಷಣವು ನಡೆದಿದೆಯೆಂದರೆ ಕರ್ಮದಲ್ಲಿ ಹುಲ್ಲಿನಷ್ಟು (ಸ್ವಲ್ಪ) ತೀರಿ ಹೋದಹಾಗೆಯೆಂದು ತಿಳಿದುಕೋ.

622. ನಿನಗೆ ಬರುವುದೆಲ್ಲ ನಿನ್ನ ಕರ್ಮಕ್ಕೆ ಅನುಗುಣವಾಗಿ ಬರುವುದು. ನಿನಗಿರುವುದು ಎಲ್ಲಾ ನಿನ್ನ ಕರ್ಮಕ್ಕೆ ಅನುಗುಣವಾಗಿ ಇರುವುದು. ನಿನಗೆ ಹೋಗಿರುವುದೆಲ್ಲಾ ನಿನ್ನ ಕರ್ಮಕ್ಕೆ ಅನುಗುಣವಾಗಿ ಹೋಗಿರುವುದು.

623. ನನ್ನದು ಅಂದುಕೊಂಡ ನಿನ್ನ ಕುಲವು ಯಾವುದೋ ನಿಜವಾಗಿಯು ನಿನಗೆ ತಿಳಿದಿದೆಯಾ? ಮಧ್ಯದಲ್ಲಿ ಏನಾದರು ಬದಲಾವಣೆಯಾಗಿದೆಯೇನೊ!

624. ನನ್ನದು ಅಂದುಕೊಂಡ ನಿನ್ನ ಮತಯಾವುದೋ ನಿನಗೆ ನಿಜವಾಗಿಯು ತಿಳಿದಿದೆಯಾ? ಮಧ್ಯದಲ್ಲಿ ಏನಾದರು ಬದಲಾವಣೆಯಾಗಿದೆಯೇನೊ!

625. ನಿನಗೆ ತಿಳಿಯದೇನೆ ಎಂದಿಗೂ ಬದಲಾಗದ ಮತದಲ್ಲಿ, ಎಂದಿಗೂ ಬದಲಾಗದ ಕುಲದಲ್ಲಿ ನೀನಿರುವೆ.

626. ನೀನು ಎಂದಿಗೂ ಬದಲಾಗದ ಜೀವಕುಲದಲ್ಲಿರುವೆ. ಹಾಗೆಯೆ ಎಂದಿಗೂ ಬದಲಾಗದ ದೈವಮತದಲ್ಲಿರುವೆ.

627. ನಿನ್ನ ಗೋತ್ರವು ಎಂದಿಗೂ ಪ್ರಕೃತಿಯೇ. ನಿನ್ನ ಮನೆ ಹೆಸರು ಎಂದಿಗೂ ಕರ್ಮವೇ.

628. ಮನೆ ಹೆಸರು ಇಲ್ಲದವನು ನಿಜವಾದ ನಿನ್ನತಂದೆ ಪರಮಾತ್ಮನೇ.

629. ಮನೆ ಹೆಸರಿರುವ ತಂದೆ ನಿನ್ನ ದೇಹಕ್ಕೆ ಸಂಬಂಧಿಸಿದವನೇ ಎಂದು ತಿಳಿದುಕೋ.

630. ಹದ್ದೇ ಇಲ್ಲದ ಮನಸ್ಸು ಅಂಶವಿಲ್ಲದ ಕರ್ಮದಿಂದ ಓಡುತ್ತಿರುವುದು.

631. ಜಗಿಯುತ್ತಿರುವ ದಂತಗಳ ಮಧ್ಯದಲ್ಲಿ ಭಯವಿಲ್ಲದ ನಾಲಿಗೆ ಯಾವ ವಿಧವಾಗಿ ಚಲನೆಯಾಗುತ್ತಿರುವುದೋ, ಅದೇ ವಿಧವಾಗಿ ಕಷ್ಟವಿಡುವ ಕರ್ಮಗಳ ಮಧ್ಯದಲ್ಲಿ ನಿರ್ಭಯವಾಗಿ ಜೀವಿಯು ಇರಬೇಕಾಗುತ್ತದೆ.

632. ತಾನು ಜೀವಿಯಾಗಿದ್ದು ತನ್ನ ಶರೀರದಲ್ಲಿನ ತನ್ನ ಅಡ್ರಸ್ ಯಾವ ಜೀವಿಗೂ ತಿಳಿಯದಂತೆ ಹೋಗಿದೆ.

633. ಶರೀರವೆನ್ನುವ ಊರಿನಲ್ಲಿ ತನ್ನ ಮನೆಯಾಗಲಿ,ತನ್ನ ಪಕ್ಕದಲ್ಲಿರುವನನ್ನಾಗಲಿ ತಿಳಿಯದಂತೆ ಬದುಕುತ್ತಿರುವವನು ಜೀವಾತ್ಮ.

634. ಪ್ರಪಂಚ ಜ್ಞಾನದಲ್ಲಿ ರಾಜನಿಗೆ ಬಡವನಿಗೆ ಎಷ್ಟು ವ್ಯತ್ಯಾಸ ಇರುವುದೋ, ಪರಮಾತ್ಮನ ಜ್ಞಾನದಲ್ಲಿ ಬ್ರಹ್ಮರ್ಷಿಗೂ ಬೇವರ್ಷಿಗೂ ಅಷ್ಟೇ ವ್ಯತ್ಯಾಸವಿರುವುದು.

635. ಎಂತಹ ಗಿಡಕ್ಕಾದರೂ ಗಾಳಿಬೀಸುವಿಕೆ ತಪ್ಪದು. ಎಂತವನಿಗಾದರು ಕರ್ಮಶ್ರಮ ತಪ್ಪದು.

636. ಎಂತಹ ಜ್ಞಾನಿಗಾದರು ಚಂಚಲ ಮನದ ಬಾಧೆ ತಪ್ಪದಹಾಗೆ ಎಂತಹ ದೇವತೆಗಾದರು ಕಷ್ಟಗಳು ಬಾಧೆಗಳು ತಪ್ಪವು.

637. ಮನುಷ್ಯರಲ್ಲಿ ಧನಿಕರು ಬಡವರಿದ್ದಹಾಗೆ ದೇವತೆಗಳಲ್ಲೂ ಕೂಡ ಧನಿಕರು ಬಡವರಿರುವರು.

638. ಮನುಷ್ಯರಿಗೆಲ್ಲರಿಗೂ ಒಂದೇ ದೇವರು ಯಾರಾದರೆ ಇರುವನೋ, ದೇವತೆಗಳೆಲ್ಲರಿಗೂ ಕೂಡ ಆತನೇ ದೇವರು.

639. ಯಾರಾದರು ಕಷ್ಟಗಳಿಂದ ಸುಖಗಳೆಡೆ ಬಂದರೂ ಅಥವಾ

ಸುಖಗಳಿಂದ ಕಷ್ಟಗಳೆಡೆ ಹೋದರು ಅದು ಅವನ ಬುದ್ಧಿಯ ಅನುಸಾರವಾಗಲ್ಲ, ಅವನ ಕರ್ಮದನುಸಾರವಾಗಿಯೆಂದು ತಿಳಿಯಬೇಕು.

640. ನೀರು ಭೂಮಿಯೊಳಗೆ, ಭೂಮಿ ಮೇಲೆ ಇರುತ್ತದೆ. ಹಾಗೆಯೇ ಪರಮಾತ್ಮ ಶರೀರದೊಳಗೆ, ಶರೀರದ ಹೊರಗಿರುವನು.

641. ಹಣ್ಣಿನಲ್ಲಿನ ರಸವು ಹಣ್ಣಿನೊಳಗೆ ಪೂರ್ತಿಯಾಗಿ ಇರುತ್ತದೆ, ಆದರೆ ಹಣ್ಣಿನ ಹೊರಗೆ ಇರುವುದಿಲ್ಲ. ಹಾಗೆಯೆ ಆತ್ಮ ಶರೀರದೊಳಗಡೆಯೇ ಇರುತ್ತದೆ, ಆದರೆ ಶರೀರದಹೊರಗೆ ಇರುವುದಿಲ್ಲ.

642. ಕಿವುಡ, ಮೂಗ, ಕುಂಟ, ಕುರುಡನಾದ ಭಿಕ್ಷೆಯವನು ದೇವಾಲಯದ ಆವರಣದಲ್ಲಿ ಒಂದು ಕಡೆ ಮಾತ್ರ ಇರುತ್ತಾನೆ, ಆದರೆ ದೇವಾಲಯವೆಲ್ಲಾ ತಿರುಗುವುದಿಲ್ಲ. ಹಾಗೆಯೇ ಯಾವ ದೃಷ್ಟಿಯಿಲ್ಲದ ಜೀವಿಯು ಶರೀರ ಆವರಣದಲ್ಲಿ ಒಂದುಕಡೆ ಮಾತ್ರವೇ ಇರುತ್ತಾನೆ.

643. ಪಕ್ಷಿ ಆಕಾಶದಲ್ಲಿ ಮೇಲೆ ಹಾರಿದ ಹಾಗೆ ಉನ್ನತ ಸ್ಥಿತಿಯನ್ನು ಯೋಗದ ಮೂಲಕ ಆತ್ಮ ಜೀವಿಗೆ ತಲುಪಿಸಬೇಕೆಂದುಕೊಳ್ಳುತ್ತಿದೆ.

644. ಹಾವು ಭೂಮಿ ರಂಧ್ರಗಳಲ್ಲಿ ತೂರಿದಹಾಗೆ ಮಾಯೆ ಕಾರ್ಯಗಳ ಮೂಲಕ ಜೀವಿಯನ್ನು ನೀಚಸ್ಥಿತಿಗೆ ಸೇರಿಸಬೇಕೆಂದುಕೊಳ್ಳುತ್ತಿದೆ.

645. ಊಹೆ ಆತ್ಮ ಮೂಲಕ ಹುಟ್ಟಿದರೆ, ಆಲೋಚನೆ ಮನಸ್ಸಿನ ಮೂಲಕ ಹುಟ್ಟುತ್ತಿರುವುದು.

646. ಊಹಾತ್ಮಕವಾದದ್ದು ಸಿದ್ಧಾಂತವು, ಅಂದರೆ ಒಂದು ಸಿದ್ಧಾಂತವನ್ನು ಮೊದಲು ಆತ್ಮವೇ ತಿಳಿಸುತ್ತದೆ.

647. ಸಿದ್ಧಾಂತವು ಆತ್ಮಮೂಲಕ ಹುಟ್ಟಿದರೆ, ರಾದ್ಧಾಂತವು ಮನಸ್ಸಿನ ಮೂಲಕ ಹುಟ್ಟುತ್ತಿರುವುದು.

648. ಊಹೆಯಾಗಲಿ, ಆಲೋಚನೆಯಾಗಲಿ ಒಳಗಿನಿಂದ ಬರುವವೇ.

ಆದ್ದರಿಂದ ಯಾವುದು ಊಹೆಯೊ, ಯಾವುದು ಆಲೋಚನೆಯೊ ವೇಗವಾಗಿ ಗುರುತಿಸಲಾರರು.

649. ಬಹಳಜನರು ಊಹೆಯನ್ನು ಆಲೋಚನೆಯಾಗಿ, ಆಲೋಚನೆಯನ್ನು ಊಹೆಯಾಗಿ ಲೆಕ್ಕಿಸುತ್ತಿದ್ದಾರೆ.

650. ಅಹಂ ಎಲ್ಲಿಂದ ಪ್ರಾರಂಭಮಾಡಿ ತನ್ನ ಕೆಲಸಮಾಡುತ್ತಿರುವುದೊ ಯಾರಿಗೂ ತಿಳಿಯದು. ಆದ್ದರಿಂದ ಅಹಂಅನ್ನು ಕಪ್ಪನೆಯ ಕಾಗಿಗೆ ಲೆಕ್ಕಿಸಬಹುದು.

651. ಯಾರು ಎಚ್ಚರದಲ್ಲಿದ್ದು ನಿದ್ರೆಯೊಳಗೆ ಹೋಗಲಾರನು. ಹಾಗೆ ಹೋಗುವುದಾದರೆ ಅವನೇ ಬ್ರಹ್ಮಯೋಗಿ ಆಗುವನು.

652. ಕಾಲಿಗೆ ಎಷ್ಟು ಗಾಯವಾಗಿದೆಯೆನ್ನುವುದು ಮುಖ್ಯವಲ್ಲ. ಗಾಯವು ಎಷ್ಟು ಬಾಧಿಸುತ್ತಿದೆ, ಜೀವಿಯು ಎಷ್ಟು ಅನುಭವಿಸುತ್ತಿರುವನು ಎನ್ನುವುದು ಮುಖ್ಯ. ಅದೇ ಕರ್ಮಾನುಭವವು!

653. ಯೋಗಾಸನಗಳು ಎಷ್ಟು ಇದ್ದರೂ ಅವು ಶರೀರ ವ್ಯಾಯಾಮಕ್ಕೆ ಸಂಬಂಧಿಸಿರುವವೇ ಹೊರತು ಯೋಗಕ್ಕೆ ಸಂಬಂಧಿಸಿರುವವಲ್ಲ.

654. ಯೋಗಾಸನಗಳಿಗೂ, ಯೋಗಗಳಿಗೂ ಎಷ್ಟು ಮಾತ್ರವು ಸಂಬಂಧವಿಲ್ಲ.

655. ಯೋಗಾಸನಗಳನ್ನು ಕಲಿತಿರುವವನು ಯೋಗಿ ಆಗಲಾರನು.

656. ಪ್ರಾಣಾಯಾಮವನ್ನು ಕಲಿತಿರುವವನು ಬ್ರಹ್ಮಯೋಗಿ ಆಗಬಲ್ಲನು. ಆದರೆ ಕರ್ಮಯೋಗಿ ಆಗಲಾರನು.

657. ಕರ್ಮಯೋಗಿಯನ್ನು ಯಾರು ಗುರುತಿಸಲಾರರು. ಆದರೆ ಬ್ರಹ್ಮಯೋಗಿಯನ್ನು ಎಲ್ಲರೂ ಸುಲಭವಾಗಿ ಗುರುತಿಸುತ್ತಾರೆ.

658. ಬ್ರಹ್ಮವಿದ್ಯೆಯನ್ನು ದುಡ್ಡಿನಿಂದಕೊಳ್ಳಲಾರರು. ಆದರೆ ಒಂದು ಶ್ರದ್ಧೆಯಿಂದ ಮಾತ್ರವೇ ಅದನ್ನು ಸಂಪಾದಿಸಬಹುದು.

659. ಜ್ಞಾನವಿರುವ ಪುಸ್ತಕಗಳನ್ನು ದುಡ್ಡಿನಿಂದ ಕೊಂಡುಕೊಳ್ಳಬಹುದು.

ಆದರೆ ಆಪುಸ್ತಕದಲ್ಲಿನ ಜ್ಞಾನವನ್ನು ಶ್ರದ್ದೆಯಿಂದ ಹೊರೆತು ದುಡ್ಡಿನಿಂದ ತಲೆಗೆ ಏರಿಸಿಕೊಳ್ಳಲಾರರು.

660. ವಸ್ತ್ರಗಳು ಶರೀರಕ್ಕೆ ಅಂದವನ್ನು ಒದಗಿಸಿದಹಾಗೆ ಆತ್ಮಜ್ಞಾನವು ಜೀವಿಗೆ ಆನಂದವನ್ನು ಒದಗಿಸಬಲ್ಲದು.

661. ತಿನ್ನುವುದಕ್ಕಾಗಿಯೇ ಬದುಕುವುದು, ಬದುಕುವುದಕ್ಕಾಗಿಯೇ ತಿನ್ನುವುದು ಜೀವನವಲ್ಲ.

662. ದೈವಜ್ಞಾನವು ಪಡೆದ ಜೀವನವು ಗಣ್ಯ ಕಾರ್ಯದಂತದ್ದು. ದೈವಜ್ಞಾನವು ಇಲ್ಲದ ಜೀವನವು ವ್ಯರ್ಥಕಾರ್ಯದಂತದ್ದು.

663. ಆತ್ಮಾನಂದವನ್ನು ಹೊರೆತು ಮತ್ತು ಯಾವ ಇತರ ಆನಂದಗಳನ್ನು ದೊಡ್ಡದಾಗಿ ನೆನಯಬೇಡ.

664. ದಿನದಲ್ಲಿ ಉದಯಕಾಲವು, ಮಧ್ಯಕಾಲವು, ಸಾಯಂಕಾಲವು ಇರುವಹಾಗೆ ಮನುಷ್ಯನ ಜೀವನದಲ್ಲಿ ಹುಟ್ಟುವುದು, ಬೆಳೆಯುವುದು, ಸಾಯುವುದು ಇರುವವು.

665. ಭೂಮಿಮೇಲೆ ಯಾರಾದರು ಗುರುಗಳಾಗಿ, ಸ್ವಾಮೀಜಿಗಳಾಗಿ, ಬಾಬಾಗಳಾಗಿ ಚಲಾವಣೆ ಆಗಬಹುದು. ಇವರನ್ನು ಯಾರು ಬೇಡ ಎನ್ನುವುದಿಲ್ಲ. ಆದರೆ ಭಗವಂತನು ಭೂಮಿ ಮೇಲಕ್ಕೆ ಬಂದಾಗ ಅವರ ಸ್ಥಾನವೇನೊ ಭಗವಂತನು ಹೇಳುವ ಜ್ಞಾನದಿಂದ ಹೊರಗೆ ಬೀಳಬಲ್ಲದು.

666. ಗುರುಗಳಾಗಿ, ಸ್ವಾಮೀಜಿಗಳಾಗಿ, ಬಾಬಾಗಳಾಗಿ, ಪೀಠಾಧೀಪತಿಗಳಾಗಿ ಚಲಾವಣೆ ಆಗುವವರಿಗೆ ನಿಜವಾದ ಆಧ್ಯಾತ್ಮಿಕತೆ ಇರುವುದೋ ಇಲ್ಲವೋ ಹೇಳುವವನು ಒಬ್ಬ ಭಗವಂತನೇ.

667. ಗುರುಗಳಿಗೆ, ಸ್ವಾಮೀಜಿಗಳಿಗೆ, ಬಾಬಾಗಳಿಗೆ, ಪೀಠಾಧಿಪತಿಗಳಿಗೆ ವಿಭಿನ್ನವಾಗಿರುವ ಭಗವಂತನನ್ನು ಯಾರು ಗುರುತಿಸಲಾರರು.

668. ದೇವರು ಭೂಮಿ ಮೇಲಕ್ಕೆ ಸಾವಿರವರ್ಷಗಳಿಗೊಮ್ಮೆ ಯಾರಿಗೂ ತಿಳಿಯದಹಾಗೆ ಭಗವಂತನಾಗಿ ಬರುವನು. ಭಗವಂತನು ಸಾವಿರದಿನಗಳಿಗೊಮ್ಮೆ ಯಾರಿಗೂ ತಿಳಿಯದ ಹಾಗೆ ದೇವರಾಗಿ ಪ್ರವರ್ತಿಸುವನು.

669. ಆದರಣಕರ್ತನಾದ ಭಗವಂತನು ಮಾನವರನ್ನು ತನ್ನ ಜ್ಞಾನದಿಂದಲೇ ಆದರಿಸುವನು. ಹಾಗಲ್ಲದೆ ಧನ, ಕನಕ, ವಸ್ತು, ವಾಹನಗಳನ್ನು ಕೊಟ್ಟು ಆದರಿಸುವುದಿಲ್ಲ.

670. ಮನುಷ್ಯ ಭೂಮಿ ಮೇಲೆ ದೈವಜ್ಞಾನದ ಮೂಲಕ ಬಿಟ್ಟು ಯಾವುದರಿಂದಲೂ ನಿಜವಾದ ಆದರಣೆ ಹೊಂದುವುದಿಲ್ಲ.

671. ದೇವರು ಭೂಮಿಮೇಲಕ್ಕೆ ಬರುವಾಗ ಇಂತಹ ಮತದಲ್ಲಿಯೇ, ಇಂತಹ ಕುಲದಲ್ಲಿಯೇ ಬರುತ್ತಾನೆಂದು ಯಾರು ಹೇಳಲಾರರು.

672. ಶೃತಿ ಇದ್ದರೆ ಲಯ ಇರುತ್ತದೆ, ಶೃತಿ ಅಂದರೆ ಜ್ಞಾನವು, ಲಯ ಅಂದರೆ ಮೋಕ್ಷವು.

673. ಶೃತಿ ಲಯಗಳು ಇರುವುದನ್ನು "ಸಂಗೀತವು" ಎನ್ನುತ್ತೇವೆ. "ಸಂ" ಅಂದರೆ ಒಳ್ಳೆಯ "ಗೀತ" ಅಂದರೆ ಹದ್ದು. ಸಂಗೀತವು ಒಳ್ಳೆಯ ಜ್ಞಾನವನ್ನು ಹೊಂದಿರುವುದೆಂದು ಅರ್ಥವು.

674. ಸಂ ಅಂದರೆ ಒಳ್ಳೆಯದೆಂದು, ಸಾರವು ಅಂದರೆ ರುಚಿ ಎಂದು ಅರ್ಥವು. ಇದರ ಪ್ರಕಾರವು ಸಂಸಾರವು ಅಂದರೆ ಒಳ್ಳೆಯ ರುಚಿಇರುವುದೆಂದು ಅರ್ಥವು.

675. ಸಂಸಾರ ದೇಹದೊಳಗೆ ಇರುವುದು. ದೇಹದೊಳಗಿನ ಸಂಸಾರದಲ್ಲಿ ಸಂಗೀತವನ್ನು ಹೊಂದಿದವನು ಧನ್ಯನು.

676. ಸಂಸಾರವು ಸಂಗೀತಮಯವು ಆಗಬೇಕು ಆದರೆ ಸಾಗರಮಯವು ಆಗಬಾರದು.

677. "ಸಂಸಾರವು ಸಂಗೀತವು" ಎನ್ನುವ ವಾಕ್ಯವು, "ಸಂಸಾರವು ಸಾಗರವು" ಎನ್ನುವ ವಾಕ್ಯವು ಎರಡಿರುವವು. ಎಲ್ಲರಿಗೂ ಸಂಸಾರವು ಸಾಗರವೆಂದು ತಿಳಿದಿದೆ, ಆದರೆ ಸಂಸಾರವು ಸಂಗೀತವೆಂದು ತಿಳಿಯದು.

678. ಸಂಸಾರವು ಯಾರಿಗೂ ಹೊರಗಡೆಯಿಲ್ಲ. ಎಲ್ಲರಿಗೂ ದೇಹದೊಳಗೇ ಸಂಸಾರವಿರುವುದು.

679. ನೀನು ನಿನ್ನ ಕಣ್ಣು ಹಿಂದೆಯಿಂದ ದೃಷ್ಯಗಳನ್ನು ನೋಡುತ್ತಿರುವೆ. ನಿನ್ನ ಕಣ್ಣು ಹಿಂದೆಗಡೆ ನೀನು ಎಷ್ಟು ದೂರದಲ್ಲಿ ಇರುವೆಯೋ ಹೇಳಿಕೊಳ್ಳಬಲ್ಲೆಯಾ?

680. ಮಾನವನನ್ನು ತನ್ನ ಕಡೆಗೆ ಸೆಳೆಯುವುದಕ್ಕೆ ಮಾಯೆಗೆ ಮೊದಲ ಆಯುಧ "ಹಸಿವು".

681. ಹೊಟ್ಟೆಯಲ್ಲಿ ಉಂಟಾಗುವ ಹಸಿವಿನಿಂದ ಧನಿಕನಾಗಲಿ, ಬಡವನಾಗಲಿ, ಜ್ಞಾನಿಯಾಗಲಿ, ಅಜ್ಞಾನಿಯಾಗಲಿ ಹೊರಗೆ ಪ್ರಪಂಚದಲ್ಲಿ ಏನಾದರು ಮಾಡುತ್ತಿರುವನು.

682. ಮಾನವನನ್ನು ತನ್ನ ಕಡೆಗೆ ಸೆಳೆಯುವುದಕ್ಕೆ ಮಾಯೆಗೆ ಎರಡನೆಯ ಆಯುಧ ಆಲೋಚನೆ.

683. ಹಸಿವು, ಆಲೋಚನೆ ಎರಡು ಮಾಯೆಯೊಂದರ ಪ್ರಿಯಪುತ್ರಿಯರು, ನಿನ್ನನ್ನು ಬಿಡದ ತಂಗಿಗಳು.

684. ನಿನಗೆ ತಂದೆ ಪರಮತ್ಮನಾದರೆ, ತಾಯಿ ಪ್ರಕೃತಿ (ಮಾಯೆ)ಆದರೆ, ಆತ್ಮ ಅಣ್ಣನಾಗಿ ಇರುವಾಗ, ಹಸಿವು ದೊಡ್ಡತಂಗಿಯಾಗಿ, ಆಲೋಚನೆ ಚಿಕ್ಕ ತಂಗಿಯಾಗಿ ಇರುವಾಗ, ಜ್ಞಾನವು ಸೋದರಮಾವನಾಗಿ ಇರುವುದು.

685. ದೊಡ್ಡ ತಂಗಿಯಾದ ಹಸಿವಿಗೆ ಆಹಾರವು ಕೊಟ್ಟರೆ ಸ್ವಲ್ಪಹೊತ್ತಾದರು ಸುಮ್ಮನೆ ಇರುತ್ತದೆ. ಆದರೆ ಚಿಕ್ಕತಂಗಿಯಾದ ಆಲೋಚನೆ ಮಾತ್ರವು ಏನುಕೊಟ್ಟರೂ ಕ್ಷಣವುಕೂಡ ಸುಮ್ಮನಿರದೆ ನಿನ್ನನ್ನು ವೇಧಿಸುತ್ತಲೇಇರುತ್ತದೆ.

686. ನಿನ್ನ ತಂಗಿಯರ ಬಾಧೆ ತಪ್ಪಿಹೋಗಬೇಕೆಂದರೆ ನಿನ್ನಮಾವನಿಗೆ ಹೇಳಿಕೋ. ನಿನ್ನ ತಂಗಿಗಳನ್ನು ಸುಧಾರಿಸುವ ಬಾಧ್ಯತೆಯಾಗಲಿ, ಸಾಮರ್ಥ್ಯವಾಗಲಿ ನಿನ್ನಮಾವನಿಗೇ ಇರುವುದು.

687. ನಿನ್ನ ಅಣ್ಣನಮನೆಯಲ್ಲಿ, ನಿನ್ನ ಅಣ್ಣನ ಕೆಲಸದವರ ಮಧ್ಯದಲ್ಲಿ ನೀನು ನಿನ್ನ ಕುಟುಂಬ ಸಭ್ಯರಜೊತೆ ನಿವಾಸಿಸುತ್ತಿರುವೆ. ಅದು ತಿಳಿಯದೆ ಎಲ್ಲಾ ನಿನ್ನ ಸಂಸಾರವೇ ಎಂದುಕೊಳ್ಳುತ್ತಿರುವೆ.

688. ಅಂಡಜ, ಪಿಂಡಜ, ಉದ್ಭಿಜಗಳೆನ್ನುವ ಜೀವಿಗಳ ಶರೀರಗಳು ಮೂರು ವಿಧಗಳಾಗಿ ಇರುವುದು. ಅದರಲ್ಲಿ ಅಂಡಜ ಪಿಂಡಜಗಳು ಹಸಿವು ಇರುವುದಾಗಿ ಇರುವವು. ಉದ್ಭಿಜಗಳು ಹಸಿವು ಇಲ್ಲದಿರುವುದಾಗಿ ಇರುವವು.

689. ಹಸಿವಿರುವ ಅಂಡಜ ಪಿಂಡಜಗಳಿಂದ ರೋಗಗಳು ವ್ಯಾಪಿಸುತ್ತಿರುವವು. ಹಸಿವಿಲ್ಲದ ಗಿಡದಿಂದ ಔಷಧಗಳು ತಯಾರಿಯಾಗುತ್ತಿರುವವು. ಆದ್ದರಿಂದ ಶರೀರಗಳು ಮಾಯಕ್ಕೆ ಗುರುತು, ಗಿಡಗಳು ಜ್ಞಾನಕ್ಕೆ ಗುರುತು.

690. ಮಾಯೆ ನಿನಗೆ ಕೆಟ್ಟದನ್ನು ಮಾಡುತ್ತದೆಯೆಂದು ತಿಳಿಸುವುದಕ್ಕೆ ಶರೀರಗಳು ದುರ್ಗಂಧವನ್ನು, ಜ್ಞಾನವು ನಿನಗೆ ಒಳ್ಳೆಯದು ಮಾಡುತ್ತದೆಯೆಂದು ತಿಳಿಸುವುದಕ್ಕೆ ಗಿಡಗಳು ಸುಗಂಧವನ್ನು ಹೊಂದಿರುವವು.

691. ಮಾಯೆಗೆ ಗುರುತಾದ ಶರೀಗಳು ಕೆಳಕ್ಕೆ ಬೆಳೆದು ಅಧೋಗತಿಯನ್ನು ಸೂಚಿಸಿದರೆ, ಜ್ಞಾನಕ್ಕೆ ಗುರುತಾದ ವೃಕ್ಷಗಳು ಮೇಲಕ್ಕೆ ಬೆಳೆದುಉನ್ನತ ಗತಿಯನ್ನು ಸೂಚಿಸುತ್ತಿರುವವು.

692. ನಿಜವಾಗಿ ಇಲ್ಲದ ದೇವರನ್ನು ಅವನಿಲ್ಲ ಎನ್ನುವವರು ನಾಸ್ತಿಕರು. ಅಬದ್ಧ (ಸುಳ್ಳು,ಬದ್ಧತೆಯಿಲ್ಲದವ) ನಾಗಿ ಇರುವ ದೇವರನ್ನು ಹೇಗೆ ಇರುವನು ಎನ್ನುವವರು ಹೇತುವಾದಿಗಳು.

693. ಇಲ್ಲದ ದೇವರನ್ನು ಅವನಿಲ್ಲ ಎನ್ನುವುದರಲ್ಲಿ ನಾಸ್ತಿಕರ ವಾದವೆ ಸರಿಯಾದದ್ದೇ ಆಗುತ್ತದೆ. ಆದರೆ ಇರುವ ದೇವರನ್ನು ಹೇಗೆ ಇರುವನೆಂದು ಪ್ರಶ್ನಿಸದೆ ಅವನಿಲ್ಲ ಎನ್ನುವ ಹೇತುವಾದವು ಸರಿಯಲ್ಲ.

694. ನಾಸ್ತಿಕವಾದವು, ಹೇತುವಾದವು ಬೇರೆಬೇರೆಯಾಗಿ ಇರಬೇಕು. ಆದರೆ ಹೇತುವಾದಿಗಳೆನ್ನುವ ಅವರಿಗೆ ಹೇತುವಾದವು ಯಾವುದೋ ತಿಳಿಯದೆ ನಾಸ್ತಿಕವಾದಿಗಳಹಾಗೆ ಮಾತನಾಡುವುದು ಹೇತುವಾದವೆಂದೆ ನಿಸಿಕೊಳ್ಳುವುದಿಲ್ಲ.

695. ಭೌತಿಕವು, ಅಭೌತಿಕವು ಎರಡು ವಾಸ್ತವವೇ, ಅವು ಯಾವ ದೇಶದಲ್ಲಿಯೂ ಇಲ್ಲ ನಿನ್ನ ದೇಹದಲ್ಲಿಯೇ ಇರುವವು.

696. ತಿಳಿಯದ ವಿಷಯವನ್ನು ಸಂಪೂರ್ಣವಾಗಿ ಪ್ರಶ್ನಿಸಿಕೊಂಡು ಪರಿಶೋಧಿಸಿ ಉತ್ತರ ತಿಳಿದುಕೊಳ್ಳುವವರು ನಿಜವಾದ ಹೇತುವಾದಿಗಳು. ತಿಳಿಯದ ಅಭೌತಿಕವನ್ನು ಇಲ್ಲವೆನ್ನುವವರು ಅಜ್ಞಾನಿಗಳೇ ಹೊರೆತು ಹೇತುವಾದಿಗಳಲ್ಲ.

697. ಸೈನ್ಸನ್ನು ಅಡ್ಡವಿಟ್ಟುಕೊಂಡು ಅಡ್ಡವಾಗಿ ಮಾತನಾಡುವ ಸುಳ್ಳಾದ ಹೇತುವಾದಿಗಳೂ, ಸೈನ್ಸಿನಿಂದ ತಿಳಿಯದವನನ್ನು (ದೇವರನ್ನು) ತಿಳಿದುಕೊಳ್ಳುವ ನಿಜವಾದ ಹೇತುವಾದಿಗಳೂ, ಎರಡು ವಿಧಗಳವರು ಭೂಮಿಮೇಲೆ ಇರುವರು.

698. ಇದ್ದರೇನೆ ಏನಾದರು ತಿಳಿದುಬರುವುದು. ಒಂದು ತಿಳಿಯಬೇಕು ಎಂದರೆ ನಮ್ಮಲ್ಲಿರುವ ಅನೇಕ ಪ್ರಶ್ನೆಗಳಿಗೆ ಉತ್ತರ ಸಿಗಬೇಕು. ಹಾಗಿಲ್ಲದಿದ್ದರೆ ಉತ್ತರವನ್ನು ಹುಡಕಲಾರದೆ ತಿಳಿಯದಿರುವುದನ್ನು ಇಲ್ಲವೆನ್ನುವವನು ಹೇತುವಾದಿ ಹೇಗೆ ಆಗುವನು?

699. ಮೂಢನಂಬಿಕೆಯು ಇರುವವರನ್ನು, ಗಾಢನಂಬಿಕೆಯು ಇರುವವರನ್ನು ಬಿಟ್ಟು, ಅವರ ಮಾತನ್ನು ನಂಬದೆ, ಸ್ವತಹವಾಗಿ ದೇವರು ಸುಳ್ಳಾಗಿ (ಬದ್ಧವಿಲ್ಲದೇ) ಹೇಗೆ ಇರುವನೆಂದು ಪ್ರಶ್ನಿಸಿಕೊಂಡು, ಪರಿಶೋಧನೆ ಮಾಡಿ ಕಂಡುಹಿಡಿದವನು ನಿಜವಾದ ಹೇತುವಾದಿ.

700. ಮಾವಂದಿರೆಲ್ಲರೂ ಚಂದಮಾಮ ಆಗುವುದಿಲ್ಲ. ಹಾಗೆಯೇ ದೇವತೆಗಳೆಲ್ಲರೂ ದೇವರು ಆಗುವುದಿಲ್ಲ. ಎಷ್ಟುಜನರು ಮಾವಂದಿರಿದ್ದರೂ ಭೂಮಿ ಮೇಲೆಯೇ ಇರುತ್ತಾರೆ. ಆದರೆ ಚಂದಮಾಮ ಆಕಾಶದಲ್ಲಿಯೇ ಇರುತ್ತಾನೆ. ಹಾಗೆಯೇ ಎಷ್ಟೋ ದೇವತೆಗಳಿದ್ದರೂ ಅವರೆಲ್ಲಾ ಭೂಮಿ ಮೇಲೆಯೇ ಇರುತ್ತಾರೆ ಆದರೆ ದೇವರು ಶರೀರದಲ್ಲಿಯೇ ಇರುತ್ತಾನೆ.

701. ನಡೆದುಬರುವ ತನ್ನ ಬದುಕಿನ ತೀರವನ್ನು ಕುರಿತು ಚಿಂತಿಸುವುದರಿಂದಲೇ ಮನುಷ್ಯನಲ್ಲಿ ಭಯವು ಏರ್ಪಾಟಾಗುತ್ತಿರುವುದು.

702. ತನ್ನ ಭಯವನ್ನು ತೀರಿಸುವುದಕ್ಕೆ ಮನುಷ್ಯ ದೇವತೆಗಳನ್ನು ಸೃಷ್ಟಿಸಿಕೊಂಡಿರುವನು. ಆದರೆ ತನ್ನನ್ನು ಮುಂದೇ ದೇವರು ಸೃಷ್ಟಿಸಿದ್ದಾನೆಂದು ತಾನು ಮಾತ್ರ ತಿಳಿಯುತ್ತಿಲ್ಲ.

703. ತನ್ನನ್ನು ಸೃಷ್ಟಿಸಿರುವ ದೇವರನ್ನು ಮರೆತು ತಾನು ಸೃಷ್ಟಿಸಿಕೊಂಡಿರುವ ದೇವತೆಗಳನ್ನು ಆರಾಧಿಸುವುದು ಮನುಷ್ಯನಿಗೆ ಮುಖ್ಯವಾದ ಕೆಲಸವಾಗಿದೆ.

704. ಮನುಷ್ಯರು ಸೃಷ್ಟಿಸಿಕೊಂಡ ದೇವತೆಗಳನ್ನು ಕುರಿತು ನಾಸ್ತಿಕರು ಮೂಢನಂಬಿಕೆಯೆಂದು ವಾದಿಸುತ್ತಿರುವರು. ಆದರೇ ಮನುಷ್ಯರನ್ನು ಸೃಷ್ಟಿಸಿದ ದೇವರನ್ನು ಕುರಿತು ಅವರು ಆಲೋಚಿಸುತ್ತಿಲ್ಲ.

705. ಎತ್ತು ಈಯಿದೆಂದರೆ ಗೂಟಕ್ಕೆ ಕಟ್ಟಿಹಾಕು ಎನ್ನುವಹಾಗೆ, ದೇವರು ಎಂದರೇನೆ ನಾಸ್ತಿಕರು ಮೂಢನಂಬಿಕೆ ಎನ್ನುತ್ತಿರುವರು. ಎತ್ತು ಈಯುವುದಿಲ್ಲ, ಹಸು ಈಯುತ್ತದೆ ಎಂದು ವಿವರವು ತಿಳಿದವನು ಎತ್ತು ಈಯುವುದನ್ನು ಖಂಡಿಸಿ, ಹಸುವು ಈಯುತ್ತದೆ ಎಂದು ಸಮರ್ಥಿಸುವನು.

706. ಹಸು, ಎತ್ತು ವಿವರವು ತಿಳಿಯದವನು ಎತ್ತು ಈಯುವುದು ಎಂದರೇನೆ ಕರುವನ್ನು ಕಟ್ಟಿಹಾಕೆನ್ನುತ್ತಿರುವನು. ಹಾಗೆಯೆ ದೇವರು ದೇವತೆಗಳ

ವಿವರವು ತಿಳಿಯದ ನಾಸ್ತಿಕರು ಭಕ್ತಿ ಎನ್ನುವ ಪದವು ಕೇಳಿಸುತ್ತಲೇ ಮೂಢನಂಬಿಕೆಯು ಅದನ್ನು ಹೊಡೆದುಹಾಕೆಂದನ್ನುತ್ತಿರುವರು.

707. ಕರು ಅಂದರೇನೆ ಹಸುವಿಗೆ ಹುಟ್ಟಿರುವುದಾ? ಎತ್ತುಗೆ ಹುಟ್ಟಿರುವುದಾ? ಎಂದು ಆಲೋಚಿಸದೆ ಕಟ್ಟಿಹಾಕು ಎನ್ನುವವರೂ, ಭಕ್ತಿ ಅಂದರೇನೆ ದೇವರಕಡೆ ಹುಟ್ಟಿರುವುದಾ? ದೇವತೆಗಳಕಡೆ ಹುಟ್ಟಿರುವುದಾ? ಎಂದು ಆಲೋಚಿಸದೆ ಹೊಡೆದುಹಾಕಿರೆನ್ನುವ ಇಬ್ಬರೂ ಮೂಢನಂಬಿಕೆ ಉಳ್ಳವರೇ!

708. ನಾಸ್ತಿಕರು "ಯಾವ ದೇವತೆಗಳನ್ನು" ಖಂಡಿಸಿ ಮಾತನಾಡಬೇಕೊ, ಆಸ್ತಿಕರು "ಯಾವ ದೇವರನ್ನು" ಆರಾಧಿಸಿ ಪೂಜಿಸಬೇಕೋ ತಿಳಿಯದ ಇಬ್ಬರೂ ಮೂಢನಂಬಿಕಸ್ತರೇ!

709. ಮೊದಲು ಹುಟ್ಟಿದಾಗ ಮನುಷ್ಯನಾಗಿ ಇರುವವನು, ಸ್ವಲ್ಪ ವಿದ್ಯಾಭ್ಯಾಸಮಾಡಿದ ನಂತರ ತಾನು ಬಿ.ಎಸ್.ಸಿ ಎಂದೋ, ಯಂ.ಎ ಎಂದೋ ಅಂದುಕೊಳ್ಳುವನು. ನಂತರ ಉದ್ಯೋಗವು ಮಾಡುತ್ತಿರುವಾಗ ತಾನು ಕಮಿಷ್‌ನರ್ ಎಂದೋ, ಸೂಪರಿನ್ಟೆಂಡೆಂಟ್ ಎಂದೋ ಅಂದುಕೊಳ್ಳುತ್ತಿರುವನು. ವಾಸ್ತವವಾಗಿ ನಾನೊಂದು ಜೀವಾತ್ಮ ಎಂಬ ಮಾತನ್ನೇ ಮರೆತುಹೋಗುತ್ತಿರುವನು.

710. ಯಾವ ರೋಗವೂ ನಿನ್ನ ಅಧಿಕಾರವನ್ನಾಗಲಿ, ನಿನ್ನ ಉದ್ಯೋಗವನ್ನಾಗಲಿ ನೋಡದು. ಯಾವ ರೋಗವಾದರು ನಿನ್ನನ್ನು ಒಂದು ಸಾಧಾರಣ ಮನುಷ್ಯನಾಗಿಯೇ ಲೆಕ್ಕಿಸಿ ಬಾಧಿಸುತ್ತದೆಯೆಂದು ಮರೆಯಬೇಡ.

711. ನಿನಗೆ ಎಷ್ಟೋ ಸನಿಹದಲ್ಲಿರುವ ನಿನ್ನ ಹೆಂಡತಿಯಾಗಲಿ, ನಿನ್ನ ಬಂಧುವಾಗಲಿ ನೀನು ರೋಗದಿಂದ ಬಾಧೆಪಡುತ್ತಿದ್ದರೆ ಪಕ್ಕದಲ್ಲಿಯೇ ಇದ್ದು ನೋಡಬಲ್ಲರು. ಆದರೆ ನಿನ್ನ ಬಾಧೆಯನ್ನು ಸ್ವಲ್ಪವೂ ಕೂಡ ಅವರು ತೆಗೆದುಕೊಳ್ಳಲಾರರು.

712. ಹೊರಗಿನ ವಿದ್ಯೆಗಳಲ್ಲಿ ಎಂತಹ ಸ್ಪೆಷಲಿಸ್ಟುಗಳಾಗಲಿ ಶರೀರದಲ್ಲಿರುವ ತುಸ್ಸು (ಕಾಣಿಸದ) ಹಾಗಿರುವ ಮನಸ್ಸನ್ನಾಗಲಿ ತಸ್ಸು (ನರದಕಣಕಣವು) ಹಾಗಿರುವ ಅಹಂಕಾರವನ್ನಾಗಲಿ ತಿಳಿಯಲಾಗದೆ ಇರುವರು.

713. ಗಾಜಿನ ಕನ್ನಡಿಯು ಹೊರಗೆ ನಿನ್ನ ಶರೀರವನ್ನು ಮಾತ್ರವೇ ತೋರುವುದು. ಆದರೆ ಅಹಂಅನ್ನುವ ಕನ್ನಡಿ ಒಳಗೆ ಏಕವಾಗಿ ನಿನ್ನ ಭಾವವನ್ನು ತೋರುತ್ತಿರುವುದು. ಅದರಿಂದ ನಾನು ಮಾತ್ರವಿರುವೆನೆಂದು ತಿಳಿದುಕೊಳ್ಳುತ್ತಿರುವೆ.

714. ಹಾಡನ್ನು ಚೆನ್ನಾಗಿ ಹಾಡಿದರೆ ನಾನು ಗಾಯಕನೆಂದೂ, ಗೊಂಬೆಯನ್ನು ಚೆನ್ನಾಗಿ ಚಿತ್ರಿಸಿದರೆ ನಾನು ಚಿತ್ರಕಾರನೆಂದೂ ತಿಳಿದುಕೊಳ್ಳುವ ನೀನು ನಿನ್ನನ್ನು ಹಾಡು ಹಾಡಿಸಿದ್ದು, ನಿನ್ನಿಂದ ಗೊಂಬೆ ಚಿತ್ರಿಸಿದ್ದು ಮತ್ತೊಬ್ಬನೆಂದು ತಿಳಿಯದಿರುವೆ.

715. ಒಬ್ಬ ಮನುಷ್ಯ ಒಂದು ವಿದ್ಯೆಯಲ್ಲಿ ಪ್ರಾವೀಣ್ಯನಾದನೆಂದರೆ ಆ ಪ್ರಾವೀಣ್ಯತೆ ಅವನದಲ್ಲ. ಶರೀರದ ಒಳಗಿರುವ ಅವನ ಪಕ್ಕದವನದು.

716. ಶರೀರವೆನ್ನುವ ಊರಲ್ಲಿ ನಿನ್ನ ಪಕ್ಕದಲ್ಲೇ ನಿವಾಸವಿರುವ ಅವನೇ ನಿಜವಾದ ನಿನ್ನ ಪಕ್ಕದವನು. ಆದರು ನೀನು ಅವನಜೊತೆ ಸ್ನೇಹವನ್ನು ಮಾಡುತ್ತಿಲ್ಲ.

717. ಉನ್ನತವಾದ ಉದ್ಯೋಗದಲ್ಲಿ ಇರುವವನೇ ನಿನ್ನಜೊತೆ ಮಾತನಾಡದೆ ಅವನ ಹೋದಕ್ಕೆ ಅನುಗುಣವಾಗಿರುವನು. ಆದರೂ ಕನಸಿನಲ್ಲಿ ಪ್ರಧಾನಮಂತ್ರಿಯೇ ಸ್ವತಹವಾಗಿ ನಿನ್ನಜೊತೆ ಮಾತನಾಡುವನು. ಕನಸಿನಲ್ಲಿ ಆ ಸಂಘಟನೆ ಹೇಗೆ ಸಾಧ್ಯವಾಗಿದೆಯೋ ನಿನಗೆ ತಿಳಿದಿದೆಯಾ?

718. ವಿ.ಸಿ.ಡಿ ಪ್ಲೇಟ್‌ಅನ್ನು ಗಮನಿಸಿದರೆ ಅದರಲ್ಲಿ ಏನು ಕಾಣಿಸದು. ಆದರೆ ಪ್ಲೇಯರಲ್ಲಿ ತಿರುಗುತ್ತಿರುವಾಗ ಅದರಲ್ಲಿರುವ ದೃಶ್ಯಗಳೂ

ಮಾತುಗಳೂ ಹೊರಗೆ ಬೀಳುವುದು. ಹಾಗೆಯೇ ತಲೆಯಲ್ಲಿ ಕಾಣಿಸದಂತಿರುವ ಕರ್ಮ ಜೀವನದಲ್ಲಿ ನಡೆಯುವಸಮಯದಲ್ಲಿ ಹೊರಗೆಬೀಳುವುದು.

719. ಒಂದು ಡಿ.ವಿ.ಡಿ ಪ್ಲೇಟಲ್ಲಿ ಒಂಬತ್ತು ಘಂಟೆಗಳಕಾಲ ಮೂರು ಸಿನಿಮಾಗಳು ಸಂಕ್ಷಿಪ್ತವಾಗಿ ಇರುವವು. ಹಾಗಿದ್ದಾಗ ಸ್ಪೆಷಲ್ ಡಿ.ವಿ.ಡಿಯಂತಹ ನಿನ್ನ ತಲೆಯಲ್ಲಿ ಎಷ್ಟು ಕಾಲವು? ಎಷ್ಟು ಸಮಾಚಾರವು ಕೂಡಿರುವುದು.

720. ಮಾನವನ ಕೈಯಲ್ಲಿ ತಯಾರಿ ಮಾಡಲ್ಪಟ್ಟಿರುವ ಕಂಪ್ಯೂಟರಲ್ಲಿನ ಚಿಕ್ಕ ಭಾಗವಾದ ಹಾರ್ಡ್‌ಡಿಸ್ಕಲ್ಲಿ ಸಾವಿರ ಪುಟಗಳ ಪುಸ್ತಕಗಳು ಸಾವಿರಕ್ಕಿಂತಲೂ ಹೆಚ್ಚು ಕೂಡಿದ್ದಾಗ, ದೇವರು ಮಾಡಿದ ಕಂಪ್ಯೂಟರಾದ ಮಾನವನ ತಲೆಯಲ್ಲಿ ಕೆಲ ಕೋಟಿ ವರ್ಷಗಳಷ್ಟು ಸಮಾಚಾರವಿರಬಲ್ಲದು.

721. ನಿನ್ನಲ್ಲಿ ಐದು ಪ್ರಾಣಗಳಿರುವವು. ಅವುಗಳಲ್ಲಿ ಒಂದು ಪ್ರಾಣವು ಕೂಡ ನೀನಲ್ಲ. ನೀನು ಬೇರೆ, ನಿನ್ನ ಪ್ರಾಣವು ಬೇರೆ. ನೀನು ಜೀವಾತ್ಮನು.

722. ಯಾವುದಾದರು ದೇವರ ಸೊತ್ತಾಗಿ ಲೆಕ್ಕಿಸಿದಾಗ ಅದರಲ್ಲಿ ಎಷ್ಟು ಭಾಗವು ಕೂಡ ಹಂಚಿಕೊಳ್ಳಬಾರದು. ಹಾಗೆಮಾಡಿದರೆ ದೇವರನ್ನು ಕೂಡ ಭಾಗಸ್ತನಾಗಿ ಲೆಕ್ಕಿಸಿದಂತಾಗುವುದು.

723. ನಾವು ಮಾಡುವ ವ್ಯಾಪಾರದಲ್ಲಿ ಮನುಷ್ಯರನ್ನು ಭಾಗಸ್ತರಾಗಿ ಇಟ್ಟುಕೊಳ್ಳಬಹುದು. ಆದರೆ ದೇವರನ್ನು ಭಾಗಸ್ತನಾಗಿ ಇಟ್ಟುಕೊಳ್ಳಬಾರದು. ಹಾಗೆಮಾಡಿದರೆ ದೇವರ ಹಿರಿಮೆಯನ್ನು ತಗ್ಗಿಸಿದಂತಾಗುವುದು.

724. ದೇವರಿಗೆ ಯಾವಾಗಲು ಸೇವಕನಾಗಿಯೇ ಇರಬೇಕು, ಹಾಗಿದ್ದಾಗಲೇ ದೇವರನ್ನು ಗೌರವಿಸಿದಂತಾಗುವುದು. ಆದ್ದರಿಂದ ನಿನ್ನ ವ್ಯಾಪಾರದಲ್ಲಿ ದೇವರಿಗೆ ಯಾವಾಗಲು ಭಾಗವಿಡಬೇಡ.

725. ಒಬ್ಬ ಮನುಷ್ಯನ ಸೊತ್ತನ್ನು ಮತ್ತೊಬ್ಬ ಮನುಷ್ಯ ಅವನ ಅನುಮತಿ ಇಲ್ಲದೇ ತೆಗೆದುಕೊಂಡರೆ ಅಥವಾ ಕಳ್ಳತನಮಾಡಿದರೆ ಅದು ಪಾಪವಾಗುತ್ತದೆ. ದೇವರ ಸೊತ್ತನ್ನು ಮನುಷ್ಯ ತೆಗೆದುಕೊಂಡರೆ ಅದು ಎಷ್ಟು ಪಾಪವಾಗುವುದು.

726. ಒಂದು ಗುಡಿಯಲ್ಲಿನ ಹುಂಡಿಯೊಳಗೆ ನಿನ್ನ ದುಡ್ಡನ್ನುಹಾಕಿ ನಂತರ ಅದನ್ನು ನೀನು ತೆಗೆದುಕೊಂಡರೆ ಆ ಗುಡಿಯಲ್ಲಿರುವ ದೇವರಿಗೆ ನಿನ್ನಮೇಲೆ ಕೋಪವು ಬರುತ್ತದೆ. ಹಾಗೆ ನಡೆದ ಸಂಘಟನೆಗಳೂ ಉಂಟು. ಆದ್ದರಿಂದ ನಿಜವಾದ ದೇವಾದಿ ದೇವರ ವಿಷಯದಲ್ಲಿ ಜಾಗ್ರತೆಯಾಗಿ ಇರಬೇಕು.

727. ಇಲ್ಲಿಗೆ 60 ವರ್ಷಗಳ ಪೂರ್ವದಲ್ಲಿ ತಿರುಪತಿ ವೆಂಕಟೇಶ್ವರನ ಸನ್ನಿಧಿಯಲ್ಲಿ ಹುಂಡಿಯಲ್ಲಿ ದುಡ್ಡನ್ನು ಹಾಕಿ ಸ್ವಲ್ಪ ಉಳಿಸಿಕೊಂಡಿರುವುದಕ್ಕೆ ಆ ವ್ಯಕ್ತಿಯನ್ನು ಅರ್ಧಗಂಟೆ ನಂತರ ವೆಂಕಟೇಶ್ವರನೇ ಶಿಕ್ಷಿಸಿದ್ದಾನೆ.

728. ಹೊರಗಿನ ವಿದ್ಯಾಭ್ಯಾಸಗಳಿಗೆ ಫೀಜುಗಳು ಕಟ್ಟುತ್ತೇವೆ. ಒಳಗಿನ ವಿದ್ಯಾಭ್ಯಾಸವಾದ ಜ್ಞಾನವನ್ನು ದೇವರು ತಿಳಿಸಿದರೆ, ಕೈಯಲ್ಲಾಗುವುದನ್ನು ಮಾಡುವುದೋ, ಕೊಡುವುದೋ ಮಾಡಬೇಕಾಗುವುದು. ಇಲ್ಲದಿದ್ದರೆ ನೀನು ಎಷ್ಟು ಜನ್ಮಗಳಿಗಾದರು ಆತನಿಗೆ ಬಾಕಿಇರುವೆ.

729. ವಿಷವು ಶರೀರದೊಳಗಿನ ಆತ್ಮನನ್ನು, ವಿಷಯವು ಶರೀರದಲ್ಲಿರುವ ಜೀವಾತ್ಮನನ್ನೂ ಹಿಂಸೆ ಇಡುತ್ತವೆ. ವಿಷವನ್ನು ಔಷಧವು, ವಿಷಯವನ್ನು ಜ್ಞಾನವು ನಿರೋಧಿಸಬಲ್ಲದು. ವಿಷದಲ್ಲಿರುವ ಪ್ರಭಾವವನ್ನು, ಔಷಧಿಯಲ್ಲಿರುವ ನಿರೋಧಕ ಶಕ್ತಿಯು ಎರಡು ಒಂದೇ ಪರಮಾತ್ಮನಿಂದ ಉಂಟಾಗುತ್ತಿರುವುದು.

730. ದೇವರು ಇತ್ತ ವಿಷದಲ್ಲಿಯೂ ಅತ್ತ ಔಷಧದಲ್ಲಿಯೂ, ಇತ್ತ ಅಗ್ನಿಯಲ್ಲೂ ಅತ್ತ ಕಟ್ಟಿಗೆಗಳಲ್ಲೂ, ಇತ್ತ ದೇವತೆಯಲ್ಲಿಯೂ ಅತ್ತ ರಾಕ್ಷಸನಲ್ಲಿಯೂ,

ಇತ್ತ ಜ್ಞಾನದಲ್ಲಿಯೂ ಅತ್ತ ಮೂಢತ್ವದಲ್ಲಿಯೂ, ಇತ್ತ ಆತ್ಮದಲ್ಲಿಯೂ ಅತ್ತ ಮಾಯೆಯಲ್ಲಿಯೂ ಎಲ್ಲೆಡೆ ಸಮಾನವಾಗಿ ಇರುವನು. ಆದರು ಆತನ ದೊಡ್ಡತನವನ್ನು ಯಾರೂ ಗುರುತಿಸಲಾರದೆ ಇರುವರು.

731. ಆಹಾರ ಪೋಷಕಪದಾರ್ಥಗಳು ನಾಲಕ್ಕುವಿಧಗಳೆಂದು ಗೀತೆಯಲ್ಲಿ ಹೇಳಿದ್ದಾನೆ. ಅವಲ್ಲದೆ ಏನು ತಿಂದರೂ ಕುಡಿದರೂ ಅವು ಎರಡು ವಿಧಗಳ ಪದಾರ್ಥಗಳಾಗಿ ಇರುವವು. ಒಂದು ವಿಷವು, ಎರಡನೆಯದು ಔಷಧವು.

732. ಹೊಟ್ಟೆಯೊಳಗೆ ಹಾಕುವ ಮೂಲಪದಾರ್ಥಗಳು ಒಟ್ಟು ಆರು ಆಗಿರುವಾಗ, ಅವನ್ನು ಪೋಷಕಪದಾರ್ಥಗಳೆಂದು, ವಿಷಪದಾರ್ಥಗಳೆಂದೂ, ಔಷಧಪದಾರ್ಥಗಳೆಂದೂ ಮೂರು ವಿಧಗಳಾಗಿ ವಿಭಜನೆ ಮಾಡಬಹುದು. ಈ ಮೂರು ವಿಧಗಳ ಪದಾರ್ಥಗಳು ಆತ್ಮದಮೇಲೆಯೆ ಕೆಲಸ ಮಾಡುತ್ತಿರುವವು.

733. ಮನುಷ್ಯ ಪದಾರ್ಥಗಳನ್ನು ತಿನ್ನುತ್ತಿರುವನು, ಆದರೆ ಯಾವುದು ಯಾವ ಪದಾರ್ಥವಾಗಿರುವುದು ಕೆಲವನ್ನು ತಿಳಿದು ತಿನ್ನುತ್ತಿರುವನು. ಕೆಲವನ್ನು ತಿಳಿಯದೆ ತಿನ್ನುತ್ತಿರುವನು. ಅವೆಲ್ಲವೂ ಅವನ ಕರ್ಮಾನುಸಾರವೇ ಲಭಿಸುತ್ತಿರುವವು. ತಿನ್ನುವುದು ಕುಡಿಯುವುದು ಯಾವುದಾದರೂ ಕರ್ಮಾನುಸಾರವೇ ದೊರೆಯುತ್ತಿರುವುದು.

734. ಒಂದೇ ಪದಾರ್ಥವೇ ರೋಗವಿರುವಾಗ ತಿಂದರೆ ಔಷಧವಾಗಿ, ರೋಗವು ಇಲ್ಲದಾಗ ತಿಂದರೆ ವಿಷವಾಗಿ ಕೆಲಸ ಮಾಡುತ್ತಿರುವುದು. ಕೆಲವು ಪದಾರ್ಥಗಳು ರೋಗವಿರುವಾಗ ತಿಂದರೆ ವಿಷವಾಗಿ, ರೋಗವಿಲ್ಲದಾಗ ತಿಂದರೆ ಪೋಷಕವಾಗಿ ಕೆಲಸ ಮಾಡುತ್ತಿರುವವು. ಮತ್ತೊಂದು ವಿಚಿತ್ರವೇನೆಂದರೆ ಒಂದೇ ಪದಾರ್ಥವು ಒಬ್ಬನಿಗೆ ಔಷಧವಾಗಿ, ಮತ್ತೊಬ್ಬನಿಗೆ ವಿಷವಾಗಿ ಕೆಲಸಮಾಡುತ್ತಿರುವುದು. ಇದನ್ನು ಅನುಸರಿಸಿ ನೋಡಿದರೆ ಎಲ್ಲದಕ್ಕೂ ಕರ್ಮವೇ ಕಾರಣವೆಂದು ತಿಳಿಯುತ್ತಿರುವುದು.

735. ಪ್ರಪಂಚ ಕಾರ್ಯಗಳ ಮೇಲೆ ಶ್ರದ್ಧೆ ಕರ್ಮಪ್ರಕಾರವೇ ಇರುತ್ತದೆ. ಆದರೆ ಪರಮಾತ್ಮ ಸಂಬಂಧ (ದೈವಸಂಬಂಧ) ಕಾರ್ಯಗಳ ಮೇಲೆ ಶ್ರದ್ಧೆ ನಿನ್ನ ಇಷ್ಟಪ್ರಕಾರವೇ ಇರುತ್ತದೆ. ಅಂದರೆ ಜ್ಞಾನದಲ್ಲಿ ನೀನು ಸ್ವತಂತ್ರನೆಂಬ ಮಾತು. ಅಜ್ಞಾನದಲ್ಲಿ ಎಂದಿಗೂ ಅಸ್ವತಂತ್ರನೇಯೆಂದು ತಿಳಿದುಕೋ.

736. ಜೀವನವು ಸುಖ ದುಃಖ ಸಂಗಮವು. ಆದರೂ ಮನುಷ್ಯ ಸುಖಗಳನ್ನೇ ಕೋರಿಕೊಳ್ಳುವನು. ದುಃಖಗಳನ್ನು ಬೇಡವೆಂದುಕೊಳ್ಳುವನು. ಆದರೆ ಅವುಯಾವು ನಿನ್ನ ಇಷ್ಟ ಪ್ರಕಾರ ಬರುವುದಿಲ್ಲ, ಹೋಗುವುದಿಲ್ಲ.

737. ಎಷ್ಟು ಜ್ಞಾನವು ಕೇಳಿದರೂ ಮನುಷ್ಯ ಅಜ್ಞಾನದಕಡೆಗೆ ಮಾತನಾಡುವನು. ಮನುಷ್ಯ ಎಷ್ಟು ಅಜ್ಞಾನದ ಕಡೆಗೆ ಮಾತನಾಡಿದರೂ ಗುರುವು ಸಹನೆಯಿಂದ ಮನುಷ್ಯನನ್ನು ಜ್ಞಾನದ ಕಡೆಗೆ ಹೋಗುವಹಾಗೆಯೇ ಮಾಡಬೇಕೆಂದು ಪ್ರಯತ್ನಿಸುತ್ತಿರುವನು.

738. ಅಹಂ ಕನ್ನಡಿ ಇದ್ದಹಾಗೆ, ಮನಸ್ಸು ಸಿನಿಮಾ ಇದ್ದಹಾಗೆ. ಮನಸ್ಸು ಯಾವಾಗ ನೋಡಿದರೂ ಹೊರಗಿನ ವಿಷಯಗಳನ್ನೇ ತೋರುತ್ತಿರುವುದು. ಅಹಂ ಯಾವಾಗ ನೋಡಿದರೂ ನಿನ್ನನ್ನು ನಿನಗೇ ತೋರುತ್ತಿರುವುದು. ಅಹಂಅಲ್ಲಿ ನೀನು ಬಿಟ್ಟು ಯಾರು ಕಾಣಿಸುವುದಿಲ್ಲ. ಮನಸ್ಸಿನಲ್ಲಿ ಎಲ್ಲಾ ವಿಧಗಳ ವಿಷಯಗಳು ಕಾಣಿಸುತ್ತಿರುವವು.

739. ಸ್ತ್ರೀಲಿಂಗವು, ಪುಲ್ಲಿಂಗವು ಎಂದು ಹೇಳುತ್ತೇವೆ. ಈ ಎರಡು ಪದಗಳಲ್ಲಿ ಲಿಂಗವು ಎನ್ನುವುದು ಸಾಧಾರಣವಾಗಿ ಇರುವುದು. ಇದರ ಅನುಸಾರವಾಗಿ ಸ್ತ್ರೀಯರಲ್ಲಾಗಲಿ, ಪುರುಷರಲ್ಲಾಗಲಿ ಪರಮಾತ್ಮ (ಲಿಂಗವು) ಸಾಧಾರಣವಾಗಿ ಇರುವುದೆಂದು ತಿಳಿಯುತ್ತಿರುವುದು.

740. ಆನೆಯು ಎಷ್ಟು ದೊಡ್ಡದಾದರೂ ತನ್ನ ಶಿಕ್ಷಕನ ಮಾತನ್ನು ಬುದ್ಧಿಯಿಂದ ಕೇಳುತ್ತಿದೆ. ಮನುಷ್ಯ ಎಷ್ಟು ಚಿಕ್ಕವನಾದರೂ ತನ್ನ ಗುರುವು ಮಾತನ್ನು ಬುದ್ಧಿಯಿಂದ ಕೇಳದಿರುವನು.

741. ಅಹಂ ಕನ್ನಡಿಇದ್ದಹಾಗೆಯೇ, ಎದುರುಗಿರುವವನ ದೃಶ್ಯವನ್ನು ಅವನಿಗೇ ತೋರುವುದು. ತನ್ನಮುಂದೆ ಇರುವವನನ್ನು ಇದ್ದಹಾಗೆಯೇ ತೋರುವುದು ಸಾಧಾರಣ ಕನ್ನಡಿಯು. ಆದರೆ ಅಹಂ ಎನ್ನುವ ಕನ್ನಡಿಯು ಸಾಧಾರಣ ಕನ್ನಡಿಯಲ್ಲ, ಅದು ಒಂದು ಅಸಾಧಾರಣ ಕನ್ನಡಿಯು.

742. ಅಹಂ ಎನ್ನುವುದು ಅಸಾಧಾರಣ ಕನ್ನಡಿಯು ತನ್ನಮುಂದಿರುವ ದೃಶ್ಯವನ್ನು ತೋರಿಸುವುದಿಲ್ಲ. ತನ್ನಮುಂದಿರುವವನ ಒಳಗಿನ ದೃಶ್ಯವನ್ನು ತೋರುವುದು. ಯಾರನ್ನಾದರೂ ಅವನೊಳಗಿನ ಭಾವವನ್ನು ಅನುಸರಿಸಿ ಯಾವವಿಧಗಳಲ್ಲಾದರೂ ತೋರಬಲ್ಲದು. ಒಂದು ಮನುಷ್ಯನನ್ನು ರಾಜನಾಗಿ ಆಗಲಿ, ಮಂತ್ರಿಯಾಗಿ ಆಗಲಿ, ಮಾಂತ್ರಿಕನಾಗಿ ಆಗಲಿ, ಆಫಿಸರ್‌ಆಗಿ ಆಗಲಿ, ಗುಮಾಸ್ತನಾಗಿ ಆಗಲಿ, ವ್ಯಾಪಾರಿಯಾಗಿ ಆಗಲಿ, ಬಿಕಾರಿಯಾಗಿ ಆಗಲಿ, ಧನಿಕನಾಗಿ ಆಗಲಿ, ರೈತನಾಗಿ ಆಗಲಿ, ಡ್ರೈವರ್‌ಆಗಿ ಆಗಲಿ, ಕ್ಲೀನರ್‌ಆಗಿ ಆಗಲಿ ಹೀಗೆ ಹೇಗಾದರೂ ತೋರಬಲ್ಲದು.

743. ಪ್ರಪಂಚದಲ್ಲಿ ಹೊರಗೆ ಎಲ್ಲೂ ಇಲ್ಲದ ವಿಚಿತ್ರ ಕನ್ನಡಿಯು ನಮ್ಮೊಳಗೆ ಇರುವುದು. ಎಕ್ಸ್–ರೇಗಳು ಮನುಷ್ಯನೊಳಗಿರುವ ಮೂಳೆಗಳನ್ನು ತೋರಿಸಿದಹಾಗೆ ಅಹಂ–ಕಾರಗಳು ಮನುಷ್ಯನೊಳಗಿರುವ ಭಾವಗಳನ್ನು ಅವನಿಗೇ ತೋರಿಸುವವು.

744. ಒಳಗಿನ ಕನ್ನಡಿಯೊಂದರ ಕೆಲಸತನವನ್ನು ನೋಡಿದರೂ, ಕೇಳಿದರೂ ಯಾರಾದರೂ "ಆಹಾ' ಎನ್ನುವುದು ತಪ್ಪುವುದಿಲ್ಲ. ಆಹಾ ಎನಿಸಿಕೊಂಡ ಅದು ಒಳಗೆ ಹೇಗಿರುವುದೆಂದರೆ! ಯಾರಿಗಾದರೂ ಇಲ್ಲದ ದೀರ್ಘಗಳು ಅಂಟಿಸಿ ತೋರಿಸುವ ತಾನು ಮಾತ್ರ ತನಗಿರುವ ದೀರ್ಘಗಳನ್ನು ತೆಗೆದುಹಾಕಿಕೊಂಡು ನಾನು ಕೇವಲ "ಅಹ" ಎಂದೇ ಹೇಳುತ್ತಿದೆ.

745. ಶರೀರದೊಳಗೆ ಅಹಂ ಮುಂದೆಗಡೆ ಕ್ರಮವಾಗಿ ಚಿತ್ತವು, ಬುದ್ಧಿ,

ಜೀವಿಯು ಇರುವುದರಿಂದ ಬುದ್ಧಿಯೊಂದರ ಯೋಚನೆಗಳನ್ನು, ಚಿತ್ತವು ಒಂದರ ನಿರ್ಣಯಗಳನ್ನು ಬೆರೆಸಿ ಜೀವಿಯೊಳಗೆ ತೋರುತ್ತಿರುವುದು. ಆದ್ದರಿಂದ ಜೀವಿಯು ನನ್ನ ಯೋಚನೆ, ನನ್ನ ನಿರ್ಣಯವು ಎಂದು ಹೇಳುತ್ತಿರುವನು.

746. ಅಹಂ ಮುಂದೆ ಚಿತ್ತವು ಬುದ್ಧಿ ಇರುವುದೆಂದು, ಆನಂತರ ನಾನಿರುವೆನೆಂದು, ಅಹಂ ಮೂವರನ್ನು ಕೂಡಿಸಿ ತೋರುತ್ತಿರುವುದೆಂದು, ನಮ್ಮ ಮೂವರಿಗೆ ಎದುರಲ್ಲಿ ಕನ್ನಡಿಯಹಾಗಿರುವ ಅಹಂಅಲ್ಲಿ ಬುದ್ಧಿ ಚಿತ್ತದ ಒಂದು ಭಾವಗಳು ನನ್ನಲ್ಲಿರುವಹಾಗೆ ಕಾಣಿಸುತ್ತಿರುವುದೆಂದು, ನಿಜವಾಗಿ ಬುದ್ಧಿಬೇರೆ, ಚಿತ್ತವುಬೇರೆ, ನಾನುಬೇರೆಯೆಂದು ಯಾವ ಜೀವಿಯು ತಿಳಿಯದೇ ಇರುವನು.

747. ಅಹಂ ಎನ್ನುವ ಕನ್ನಡಿಗೆ ಎದುರಾಗಿ ಇಲ್ಲದ ಮನಸ್ಸಿನಒಂದು ಆಲೋಚನೆಗಳನ್ನು ಮನುಷ್ಯ ತನ್ನದೆಂದುಕೊಳ್ಳಲಿಲ್ಲ. ಆದರೆ ಬುದ್ಧಿ ಚಿತ್ತ ಒಂದರ ಕೆಲಸಗಳನ್ನು ತನ್ನದೇ ಎಂದುಕೊಳ್ಳುತ್ತಿರುವನು. ಅದಕ್ಕೆ ಕಾರಣವು ಅಹಂ ಮುಂದೆ ಕ್ರಮವಾಗಿ ಚಿತ್ತವು, ಬುದ್ಧಿ, ಜೀವಿಯು ಇರುವುದರಿಂದಲೇ.

748. ಮನಸ್ಸು ತೋರುವ ಆಲೋಚನಾ ದೃಶ್ಯಗಳನ್ನು ಜೀವಿಯು ತಾನು ಪಕ್ಕದಿಂದ ನೋಡಿದಹಾಗೆ ಅನುಭೂತಿ ಹೊಂದುವನು. ಆದರೆ ಬುದ್ಧಿ ಚಿತ್ತದ ಕೆಲಸಗಳಲ್ಲಿ ಬೆರೆತುಹೋಗಿ ಅವು ತನ್ನದೇ ಅಂದುಕೊಂಡಹಾಗೆ ಮನದದೃಶ್ಯಗಳನ್ನು ತಿಳಿದುಕೊಳ್ಳನು.

749. ಮನದ ಆಲೋಚನಾ ದೃಶ್ಯಗಳನ್ನು ಜೀವಿಯು ತನ್ನದೇಯೆಂದು, ತಾನೆಯೆಂದು ಅಂದುಕೊಳ್ಳದೇಇರುವುದರಿಂದ ಸ್ವಪ್ನದಲ್ಲಿ ಮನಸ್ಸು ತೋರುವ ದೃಶ್ಯಗಳನ್ನು ತಾನು ಪಕ್ಕದಲ್ಲಿದ್ದು ನೋಡಿದಂತಿರುವುದು. ಆದ್ದರಿಂದ ಮನಸ್ಸು ತೋರುವವನ್ನು "ಆಲೋಚನೆ" ಎನ್ನುತ್ತಿರುವನು, ಆದರೆ "ನಾಲೋಚನೆ" ಎನ್ನಲಿಲ್ಲ.

750. ಲೋಚನೆ ಅಂದರೆ ನೋಡುವುದು ಎಂದು, ಆಲೋಚನೆ ಅಂದರೆ ದೂರವಾಗಿ ನೋಡುವುದು ಎಂದು ಅರ್ಥವು. ನೀನು ಮನೋಭಾವವನ್ನು ಯಾವಾಗಲೂ ದೂರವಾಗಿಯೇ ನೋಡುತ್ತಿರುವೆ. ಆದ್ದರಿಂದ ಮನಸ್ಸು ತಿಳಿಯುವುದನ್ನು ಆಲೋಚನೆಗಳೇ ಎನ್ನುತ್ತಿರುವೆ.

751. ಪರಮತವನ್ನು ಕುರಿತು ಮಾತನಾಡಬೇಕೆಂದರೆ ಮುಂದೆ ನಿನ್ನ ಮತವನ್ನು ಕುರಿತು ನೀನು ಯೋಚಿಸು. ಪರಮತದೊಳಗಿನ ಲೋಪವೇನೋ? ನಿನ್ನ ಮತದೊಳಗಿ ದೊಡ್ಡತನವೇನೋ? ನ್ಯಾಯವಾಗಿ, ನೀತಿಯಾಗಿ ನಿರ್ಣಯಿಸಿಕೋ.

752. ಪರಮತವನ್ನು ಆಗಲಿ, ನಿನ್ನ ಮತವನ್ನು ಆಗಲಿ, ಸ್ವಾರ್ಥ ಬುದ್ಧಿಯಿಂದ ಆಗಲಿ, ರಾಜಕೀಯವಾಗಿ ಆಗಲಿ, ಸಮಾಜಪರವಾಗಿ ಆಗಲಿ ಯೋಚಿಸಬೇಡ.

753. ಒಂದುವೇಳೆ ನಿನ್ನ ಮತವು ದೊಡ್ಡದಾಗಿ, ಪರಮತವು ನೀಚವಾಗಿ ಕಾಣಿಸಿದರೆ, ಮತವನ್ನು ಕುರಿತು ಬಿಟ್ಟುಹಾಕಿ, ಮತದ ಒಂದು ಪ್ರಾಧಾನ್ಯತೆ ಇಲ್ಲದೆ ಕೇವಲ ದೇವರನ್ನು ಕುರಿತೇ ಬೋಧಿಸು, ದೇವರು ಎಲ್ಲಾ ಮತಗಳಿಗೂ ಆದರಣೀಯನು ಆದ್ದರಿಂದ ಯಾವ ಮತಸ್ಥನಾದರು ನಿನ್ನ ಮಾತು ಕೇಳಬಲ್ಲನು.

754. ಒಂದುವೇಳೆ ಪರಮತವು ದೊಡ್ಡದಾಗಿ, ನಿನ್ನ ಮತವು ನೀಚವಾಗಿ ಕಾಣಿಸಿದರೇ, ನೀನು ಮತವನ್ನು ಮಾತ್ರ ಬದಲಾಯಿಸಬೇಡ. ನಿನ್ನನ್ನು ಈ ಮತದಲ್ಲಿಯೇ ದೇವರು ಏಕೆ ಹುಟ್ಟಿಸಿರುವನೋ ಯೋಚಿಸು. ಆಗ ಮತ ಚಿಂತೆಹೋಗಿ ದೈವ ಚಿಂತೆ ಉಂಟಾಗುತ್ತದೆ.

755. ಮತ ಎನ್ನುವ ಹೆಸರು ಪ್ರತಿ ವರ್ಗದಲ್ಲಿಯು ಇರುವುದು. ನಿನ್ನದು ಒಂದು ಹೆಸರು ಇರುವ ಮತವಾದರೆ, ಮತ್ತೊಬ್ಬನದು ಮತ್ತೊಂದು ಹೆಸರು ಇರುವ ಮತವಾಗಿಇರುವುದು. ಮತದಲ್ಲಿ ನಿನ್ನನ್ನು ದೇವರೇ ಹುಟ್ಟಿಸಿರುವನು. ಆದರೆ ನೀನು ಕೋರಿ ಯಾವ ಮತದಲ್ಲಿಯೂ ಹುಟ್ಟಲಿಲ್ಲ.

756. ನಿನ್ನನ್ನು ಒಂದು ಮತದಲ್ಲಿ ಹುಟ್ಟಿಸಿ, ಮತ್ತೊಬ್ಬನನ್ನು ಮತ್ತೊಂದು ಮತದಲ್ಲಿ ದೇವರೇ ಹುಟ್ಟಿಸಿರುವನು. ಹಾಗೆಯೇ ನಿನ್ನನ್ನು ಇನ್ನೊಬ್ಬನನ್ನು ಹುಟ್ಟಿಸಿರುವುದು ಒಂದೇ ದೇವರೇ! ನೀನು ಹುಟ್ಟಿದ ನಂತರ ದೇವರಿಗೆ ನೀನೇ ಹೆಸರುಗಳು ಇಡುತ್ತಿರುವೆ. ನಿಜವಾಗಿ ದೇವರಿಗೆ ಹೆಸರಿಲ್ಲ, ಆಕಾರವು ಅಷ್ಟಕ್ಕೂಇಲ್ಲ.

757. ಮತಗಳಿಗೆ ಅತೀತವಾಗಿ, ಹೆಸರುಗಳಿಗೆ ಅತೀತವಾಗಿ, ರೂಪಗಳಿಗೆ ಅತೀತವಾಗಿ, ಕಾರ್ಯಗಳಿಗೆ ಅತೀತವಾಗಿ ಯಾರಾದರೆ ಇರುವನೊ ಅವನೇ ನಿಜವಾದ ದೇವರು. ಆತನೇ ನಿನ್ನನ್ನು ಈ ಪ್ರಪಂಚವನ್ನು ಸೃಷ್ಟಿಸಿರುವವನು.

758. ದೇವರು ಮನುಷ್ಯನನ್ನು ಮಾಯೆಯಲ್ಲಿ ಹುಟ್ಟಿಸಿ ನಂತರ ತನ್ನಹತ್ತಿರಕ್ಕೆ ಬರುತ್ತಾನೋ ಬರುವುದಿಲ್ಲವೋ, ತನ್ನನ್ನು ಗುರುತಿಸುತ್ತಾನೋ ಇಲ್ಲವೋ ನೋಡಬೇಕೆಂದುಕೊಂಡಿರುವನು. ಆ ಪ್ರಕ್ರಿಯೆಯಲ್ಲಿ ಮೊದಲನೆಯದೇ ನಿನ್ನನ್ನು ಒಂದು ಮತದಲ್ಲಿ ಹುಟ್ಟಿಸಿರುವುದು. ಚೆನ್ನಾಗಿ ನೋಡಿಕೊಂಡರೆ ನೀನು ಪ್ರಸ್ತುತವಾಗಿ ಮಾಯೆಯಲ್ಲಿರುವೆ, ದೇವರಕಡೆಗೆ ಹೋಗು.

759. ನಾವು ಎಲ್ಲಿಂದ ಎಲ್ಲಿಗೆ ಹೋಗಬೇಕೆಂದು ಪ್ರಶ್ನಿಸಿದರೆ ಮಾಯೆಯ ಕಡೆಯಿಂದ ದೇವರಕಡೆಗೆ ಹೋಗಬೇಕೆನ್ನುವುದು ಉತ್ತರ. ಅಂದರೆ ನೀನು ಮುಂದೆಯೇ ಮಾಯೆಯಕಡೆ ಇರುವೆಯೆಂದು ಅರ್ಥವು. ನಾನು ಇಂತಹ ಮತಸ್ಥನೆಂದು ತಿಳಿದುಕೊಳ್ಳುವುದು ಮಾಯ. ನನ್ನ ದೇವರು ಇಂತಹವನೆಂದು ತಿಳಿದುಕೊಳ್ಳುವುದು ಇನ್ನೂ ದೊಡ್ಡ ಮಾಯೆ. ಸೃಷ್ಟಿಗೆ ಎಲ್ಲಾ ಒಂದೇ ದೇವರು ಅಧಿಪತಿ.

760. ನಿನಗೆ ಒಂದು ಹೆಸರನ್ನು, ನಿನಗೆ ಒಂದು ಕುಲವನ್ನು, ಹಾಗೆಯೇ ಒಂದು ಮತವನ್ನೂ ಇತರರೇ ನಿನಗೆ ಮೊದಲು ಅಂಟಿಸಿದ್ದಾರೆ. ದೇವರಿಗೆ ಹೆಸರಿದೆಯಾ? ಕುಲವಿದೆಯಾ? ಮತವಿದೆಯಾ? ಅವು ಯಾವು ಇಲ್ಲ. ಅವಿಲ್ಲದವನನ್ನು ತಿಳಿಯಬೇಕೆಂದರೇ ನೀನು ನಿನ್ನ

ಹೆಸರನ್ನು, ಕುಲವನ್ನು, ಮತವನ್ನೂ ದೇವರ ವಿಷಯದಲ್ಲಿ ದೂರವಾಗಿಟ್ಟುಕೋ.

761. ದೇವರಿಗೆ ಶರೀರವಾಗಲಿ, ಆಕಾರವಾಗಲಿ ಇಲ್ಲ. ಹಾಗಿರುವವನನ್ನು ಒಂದು ಆಕಾರದಿಂದ ಊಹಿಸಿಕೊಳ್ಳಬೇಡ. ಹಾಗೆ ಊಹಿಸಿದರೆ ನಿನ್ನ ಊಹೆ ತಪ್ಪಾಗುತ್ತದೆ. ಆಕಾರವಿರುವುದು ಯಾವುದಾದರು ಅದು ದೇವರಲ್ಲ.

762. ದೇವರಿಗೆ ಒಂದು ಆಕಾರವೇ ಅಲ್ಲ ನಿದ್ರೆ, ಎಚ್ಚರಿಕೆ, ಹಸಿವು, ದಾಹ ಏನು ಇಲ್ಲದವನು ದೇವರು. ಸರ್ವವನ್ನು ವ್ಯಾಪಿಸಿದವನು, ಎಲ್ಲಾ ವೇಳೆಯಲ್ಲಿ ಇರುವವನು, ಎಲ್ಲರನ್ನು ಗಮನಿಸುತ್ತಿರುವವನು ದೇವರು. ಆ ದೇವರನ್ನೇ ನೀನು ತಿಳಿದುಕೋ.

763. ಯಜ್ಞಗಳ ಮೇಲೆ, ವೇದಪಠನೆಗಳ ಮೇಲೆ, ದಾನಗಳ ಮೇಲೆ, ತಪಸ್ಸುಗಳ ಮೇಲೆ ದೇವರಿಗೆ ಅನಿಷ್ಟವಿರುವುದು. ಬ್ರಹ್ಮಯೋಗವೂ, ಕರ್ಮಯೋಗವೂ, ಭಕ್ತಿ ಯೋಗಗಳ ಮೂರರ ಮೇಲೆ ದೇವರಿಗೆ ಪೂರ್ತಿ ಇಷ್ಟವಿರುವುದು.

764. ದೇವರಿಗೆ ಇಷ್ಟವಿಲ್ಲದ ಯಜ್ಞಗಳನ್ನು, ದಾನಗಳನ್ನು, ವೇದಾಧ್ಯಾಯನಗಳನ್ನು, ತಪಸ್ಸುಗಳನ್ನು ನಾಲಕ್ಕನ್ನು ಬಿಟ್ಟು ದೇವರಿಗೆ ಪ್ರೀತಿಯನ್ನು ಉಂಟುಮಾಡುವ ಬ್ರಹ್ಮಯೋಗವು, ಕರ್ಮಯೋಗವು, ಭಕ್ತಿಯೋಗಗಳನ್ನು ಮೂರರನ್ನು ಆಚರಿಸುವುದಕ್ಕೆ ಪ್ರಯತ್ನಿಸೋಣ.

765. ಈಗಿನ ಕಾಲದಲ್ಲಿ ಸ್ವಾಮಿಗಳೂ, ಪೀಠಾಧಿಪತಿಗಳು, ಬಾಬಾಗಳು ಮೊದಲಾದವರೆಲ್ಲರೂ ಯಜ್ಞಗಳು ಮಾಡುತ್ತಿರುವರು, ವೇದಗಳನ್ನು ಪಠಿಸುತ್ತಿರುವರು. ಧನಿಕರೆಲ್ಲರೂ ದಾನಗಳು ಮಾಡುತ್ತಿರುವರು. ಮೆಡಿಟೇಷನ್ ಅನ್ನುವ ಹೆಸರಿಟ್ಟು ತಪಸ್ಸುಗಳು ಮಾಡುತ್ತಿರುವರು. ಈ ವಿಧವಾಗಿ ಮಾಡುವುದೇನಾ ಭಕ್ತಿ?

766. ದೇವರು ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನಯೋಗವೆನ್ನುವ

ಆಧ್ಯಾಯನದಲ್ಲಿ 48,53 ಶ್ಲೋಕಗಳಲ್ಲಿ ಯಜ್ಞ, ದಾನ, ವೇದಾಧ್ಯಾಯನ, ತಪಸ್ಸುಗಳಿಂದ ನಾನು ತಿಳಿಯನೆಂದು ಹೇಳಿದರೆ, ದೇವರು ಹೇಳಿದಕ್ಕೆ ವ್ಯತಿರೇಖವಾಗಿ ಮಾಡುವವರನ್ನು ಸ್ವಾಮಿಗಳೆನ್ನಬೇಕೋ? ಬಾಬಾಗಳೆನ್ನಬೇಕೋ? ಪೀಠಾಧಿಪತಿಗಳೆನ್ನಬೇಕೋ? ವಿಶಿಷ್ಟ ಜ್ಞಾನಿಗಳೆನ್ನಬೇಕೋ? ಏನನ್ನಬೇಕೋ ನೀವೆ ಹೇಳಿರಿ?

767. ನಿನ್ನ ಅಧಿಕಾರವು, ನಿನ್ನ ಅಂತಸ್ತು, ನಿನ್ನ ಪ್ರಾಬಲ್ಯ, ನಿನ್ನ ಉದ್ಯೋಗವು ಮಧ್ಯದಲ್ಲೆ ಬಂದು ಮಧ್ಯದಲ್ಲೆ ಹೋಗುವವೇ. ಅವುಗಳನ್ನು ನೋಡಿ ಜಂಭಬಿಳಬೇಡ ನಿನ್ನ ಶರೀರವು ಕೂಡ ನಿನ್ನ ಮಾತನ್ನು ಕೇಳದ ದಿನವೊಂದಿದೆ ಜಾಗ್ರತೆ!

768. ಎಲ್ಲರಿಗೂ ಅಧಿಕಾರಿ ಒಬ್ಬನು ಇರುವನು. ಆತನು ಹೇಳದೇನೆ ನಡಿಸುವನು, ನೋಡಿಸದೇನೆ ಮಾಡಿಸುವನು, ಕಾಣಿಸದೇನೆ ನಿನ್ನ ಹಿಂದೆ ಇರುವನು. ಆತನೇ ಯಾರಿಗೂ ತಿಳಿಯದ ದೇವರು.

769. ದೇವರು ದೇವಲಾಡಲ್ಪಡುವವನು (ಹುಡುಕಲಾಗುವವನೇ) ಎಂದಿಗೂ ಕಾಣಿಸುವವನಲ್ಲ. ಮನುಷ್ಯ ದೇವಲಾಡುವವನು (ಹುಡುಕುವನು), ಎಂದಿಗೂ ಕಂಡುಹಿಡಿಯಲಾರನು.

770. ಪ್ರಪಂಚ ವಿಷಯಗಳಲ್ಲಿ ಮುಳಗದಿರುವುದು, ದೈವಜ್ಞಾನವನ್ನು ನೋಡಿ ಅಸೂಯೆ ಪಡೆಯದಿರುವುದು, ಮನುಷ್ಯನಿಗಿಂತಲೂ ಬುದ್ಧಿಯಲ್ಲಿ ಕಡಿಮೆ, ಜ್ಞಾನದಲ್ಲಿ ಹೆಚ್ಚಾಗಿ ಇರುವುದು, ಮನುಷ್ಯನಿಗಿಂತಲೂ ಪಾಪಸಂಪಾದನೆ ಕಡಿಮೆಯಿರುವುದು(**ಬಟ್ಟೆಗಳಿಲ್ಲದ ಪ್ರಾಣಿಯು**).

771. ದೈವಜ್ಞಾನವೆಂದರೆ ಏನೋ ತಿಳಿಯದ ಮನುಷ್ಯ, ದೇವರುಯಾರೋ, ದೇವತೆಗಳುಯಾರೋ ತಿಳಿಯದ ಮನುಷ್ಯ, ದೈವಜ್ಞಾನವನ್ನು ನೋಡಿ ಅಸೂಯೆ ಪಡುವ ಮನುಷ್ಯ, ಪ್ರಪಂಚ ವಿಷಯಗಳಲ್ಲಿ ಮುಳುಗಿಹೋಗಿ ತನ್ನ ಸಾವನ್ನು ಮರೆತಿರುವ ಮನುಷ್ಯ (**ಬಟ್ಟೆಗಳಿರುವ ಪ್ರಾಣಿಯು**).

772. ಇಂದೂಮತದಲ್ಲಿನ "ಮಾಯೆ", ಇಸ್ಲಾಮ್‌ಮತದಲ್ಲಿನ "ಸೈತಾನ್",

ಕ್ರೈಸ್ತಮತದಲ್ಲಿನ "ಸಾತಾನ್" ಎಲ್ಲಾ ಒಂದೇ. ದೈವಮಾರ್ಗಕ್ಕೆ ಅಡಚಣೆಯನ್ನು ಉಂಟುಮಾಡುವುದೇ ಮಾಯೆ.

773. ಅಂಗೈಯಲ್ಲಿ ಅತಿದೊಡ್ಡ ರಹಸ್ಯವಿರುವುದು. ಆದ್ದರಿಂದಲೇ ಗುಡಿಯಲ್ಲಿನ ಪ್ರತಿಮೆ ತನ್ನ ಹಸ್ತವನ್ನು ತೋರುತ್ತಿರುವುದು. ಅದು ಅಭಯ ಹಸ್ತವಲ್ಲ. ಅತಿ ರಹಸ್ಯವಾದ ಮೂರು ಆತ್ಮಗಳ ತ್ರೈತವು.

774. ಸಿರಿ ಎಂದರೆ ಸಂಪದ, ಮಗಸಿರಿ ಎಂದರೆ ಜ್ಞಾನ ಸಂಪದ. ಪುರುಷನು ಎಂದರೆ ಪರಮಾತ್ಮನೆಂದು, ಪುರುಷನಾದ ಪರಮಾತ್ಮನ ಜ್ಞಾನ ಇರುವವನನ್ನು ಮಗಸಿರಿ ಇರುವವನೆಂದು ಹೇಳುವರು.

775. ಸ್ತ್ರೀಯರನ್ನು ರಮಿಸುವಂತೆ ಮಾಡುವುದು ಮಗಸಿರಿಯಲ್ಲ. ಪ್ರಕೃತಿ ಜ್ಞಾನವನ್ನು ಅತಿಕ್ರಸುವ ಜ್ಞಾನವನ್ನು ಪಡೆಯುವುದೇ ನಿಜವಾದ ಮಗಸಿರಿ ಪಡೆದಿರುವಹಾಗೆಂದು ತಿಳಿಯಿರಿ.

776. ಜ್ಞಾನಗಳು ಎರಡು ವಿಧಗಳಿರುವವು. ಒಂದು ಪ್ರಕೃತಿ ಕಡೆಗೆ ನಡೆಸುವುದು, ಮತ್ತೊಂದು ಪರಮಾತ್ಮನ ಕಡೆಗೆ ನಡೆಸುವುದು. ನೀನು ಯಾವ ಜ್ಞಾನದಲ್ಲಿರುವೆಯೋ ಒಮ್ಮೆ ನೋಡಿಕೋ.

777. ದಿನಕ್ಕೆ 12 ಗಂಟೆಗಳ ಹಗಲುಕಾಲವು ಅಥವಾ 720 ನಿಮಿಷಗಳು, ಸೆಕೆಂಡುಗಳಾದರೆ 43,200 ಆಗುವವು. ಒಂದು ಸೆಕೆಂಡಿಗೆ ಹತ್ತರಷ್ಟು ಹೆಚ್ಚು ಕಾಲವನ್ನು 4,32,000 ಸೂಕ್ಷ್ಮಕಾಲವು ಎನ್ನುತ್ತೇವೆ. ಒಂದು ದಿನಕ್ಕೆ ಕಾಲದಜೊತೆಗೆ ಶರೀರದಲ್ಲಿ 4,32,000 ಬದಲಾವಣೆಗಳು ನಡೆಯುತ್ತಿರುವುದರಿಂದ ಸ್ವಲ್ಪ ಕಾಲಕ್ಕೆ ನಿನ್ನ ಶರೀರವು ಮುದುಕಿಯಾಗುತ್ತಿರುವುದು.

778. ಮನಷ್ಯನಿಗಿರುವ ಬುದ್ಧಿ, ಪ್ರಪಂಚ ಸಂಬಂಧ ವಿವರವನ್ನೂ, ಪರಮಾತ್ಮ ಸಂಬಂಧ ವಿವರವನ್ನೂ ತಿಳಿಸುತ್ತಿರುವುದು. ಮನುಷ್ಯನಿಗಿರುವ ಬುದ್ಧಿ ಕರ್ಮಕ್ಕೆ ಅನುಗುಣವಾಗಿ ಪ್ರಪಂಚ ವಿಷಯವನ್ನು ತಿಳಿಸುತ್ತಿದ್ದರೆ, ಶ್ರದ್ಧೆಗೆ ಅನುಗುಣವಾಗಿ ದೈವವಿಷಯವನ್ನು ಜೀವಿಗೆ ಗ್ರಹಿಸುವಂತೆ ಮಾಡುತ್ತಿರುವುದು.

779. ಭೂಮಿ ಮೇಲೆ ಕೆಲವು ಸಾವಿರ ಜನರು ಬೋಧಕರು ಇರಬಹುದು. ಆದರೆ ಅಷ್ಟುಜನರಲ್ಲಿ ಗುರುವು ಇಲ್ಲದಿರಬಹುದು, ಇರಬಹುದು.

780. ಗುರುವು ಅಪರೂಪವಾಗಿ ಭೂಮಿಮೇಲಕ್ಕೆ ಬರುತ್ತಾನೆ. ಆದ್ದರಿಂದ ಆತನು ಯಾವ ಕಾಲದಲ್ಲಿ ಇರುತ್ತಾನೋ ಹೇಳಲಾಗುವುದಿಲ್ಲ.

781. ಸ್ವಲ್ಪ ತಿಳಿದ ಮನುಷ್ಯ, ತಾನು ಇತರರಿಗೆ ಬೋಧಿಸುವ ಬೋಧಕನು ಆಗಬೇಕೆಂದುಕೊಳ್ಳುವನು. ಸ್ವಲ್ಪ ಬೋಧನೆ ಹೇಳುತ್ತಿರುವ ಬೋಧಕನು ತಾನು ಇತರರಿಗೆ ಉಪದೇಶಕೊಟ್ಟು ಗುರುವು ಆಗಬೇಕೆಂದು ಅಂದುಕೊಳ್ಳುವನು.

782. ಮನುಷ್ಯ ಬೋಧಕನಾಗಬಹುದು, ಆದರೆ ಗುರುವು ಎಂದಿಗೂ ಆಗಲಾರನು. ಏಕೆಂದರೆ ಮನುಷ್ಯನಿಂದ ಗುರುವು ಬರುವುದಿಲ್ಲ, ಗುರುವಿನಿಂದ ಮನುಷ್ಯ ಬರಬಲ್ಲನು.

783. ದೇವರು ಒಬ್ಬನೇ ಭೂಮಿಮೇಲೆ ಗುರುವಾಗಿ ಇರಬಲ್ಲನು. ಆದರೆ ಮನುಷ್ಯ ಗುರುವಾಗಿ ಎಂದಿಗೂ ಇರಲಾರನು. ಮನುಷ್ಯ ಬೋಧಕನಾಗಿ ಇರಬಹುದು.

784. ಈ ದಿನಗಳಲ್ಲಿ ಭೂಮಿಮೇಲೆ ಇರುವ ಸ್ವಾಮೀಜೀಗಳೆಲ್ಲರಲ್ಲಿ ಯಾರಾದರು ಗುರುವು ಇರುವನಾ? ಎಂದು ಪ್ರಶ್ನಿಸಿದರೆ ನಿಜವು ಹೇಳಬೇಕೆಂದರೆ ಬಹಳ ಕಷ್ಟವು.

785. ಪುಸ್ತಕಗಳೆಲ್ಲವು ಶಾಸ್ತ್ರಗಳಲ್ಲ. ಕೆಲವು ಚರಿತ್ರೆಗಳು, ಕೆಲವು ಪುರಾಣಗಳು, ಕೆಲವು ಕಾವ್ಯಗಳಾಗಿ ಇರುವವು, ಹಾಗೆಯೇ ಮನುಷ್ಯರೆಲ್ಲರೂ ಜ್ಞಾನಿಗಳಲ್ಲ. ಅವರಲ್ಲಿ ಕೆಲವರು ರೌಡಿಗಳು, ಕೆಲವರು ಕಳ್ಳರು, ಕೆಲವರು ಜೂಜಗಾರರಿದ್ದಾರೆ.

786. ದೇವರನ್ನು ಹೊರೆತು ಇತರ ದೇವತೆಗಳನ್ನಾಗಲಿ, ಮಾಯೆಯನ್ನಾಗಲಿ ಆರಾಧಿಸಬೇಡವೆಂದು ಹೇಳುವುದು ನಿಜವಾದ ಜ್ಞಾನವು.

787. ಮನುಷ್ಯರು ದೇವರ ಜ್ಞಾನವನ್ನು ಅರ್ಥವು ಮಾಡಿಕೊಳ್ಳದೇ ಹೋಗಿರುವುದರಿಂದಲೇ ಎಲ್ಲಾ ಅನರ್ಥಗಳಿಗೆ ಕಾರಣವಾದ ಹಿಂಸೆಗಳು, ದರೋಡೆಗಳು ಅವಿನೀತಿ ಅಕ್ರಮಗಳು ಮನುಷ್ಯರಲ್ಲಿ ಉದ್ರೇಕಗೊಳ್ಳುತ್ತಿರುವವು.

788. ಹಿಂಸೆಯಿಂದಾಗಲಿ, ಭಯವಿಟ್ಟಾಗಲಿ ಯಾರನ್ನೂ ಬದಲಾಯಿಸಲಾರೆವು. ಜ್ಞಾನವನ್ನು ಬೋಧಿಸಿ ಯಾರನ್ನಾದರೂ, ಎಂತಹ ಮೂರ್ಖನನ್ನಾದರೂ ಬದಲಾಯಿಸಬಹುದು.

789. ಭಯವಿಟ್ಟು ಹೊರಗೆ ಬದಲಾಯಿಸಬಲ್ಲರು ಆದರೆ ಒಳಗೆ ಬದಲಾಯಿಸಲಾರೆವು. ಭಯದಿಂದ ಯಾರಾದರು ಹೊರಗೆ ಬದಲಾದಹಾಗೆ ನಟಿಸುವನು ಆದರೆ ಒಳಗೆ ತನ್ನ ಸ್ವಭಾವವನ್ನು ಮಾತ್ರ ಬಿಟ್ಟಿರುವುದಿಲ್ಲ.

790. ಯಾರಾದರು ತನ್ನ ಸ್ವಭಾವವನ್ನು ಒಳ್ಳೆಯದೆಂದೇ ತಿಳಿದುಕೊಳ್ಳುತ್ತಿರುವನು. ಎದುರಿರುವವನ ಭಾವವನ್ನು ಕೆಟ್ಟದೆಂದೇ ತಿಳಿದುಕೊಳ್ಳುತ್ತಿರುವನು.

791. ಎಷ್ಟು ಅಜ್ಞಾನಿಯಾದರು ಇತರರಿಗೆ ನಾನು ಜ್ಞಾನಿ ಎಂದೇ ಹೇಳಿಕೊಳ್ಳುತ್ತಿರುವನು. ಅದೇ ವಿಧವಾಗಿ ಎಷ್ಟು ಧನಿಕನಾದರು ಇತರರಿಗೆ ನಾನು ಬಡವನೆಂದೇ ಹೇಳಿಕೊಳ್ಳುತ್ತಿರುವನು.

792. ಸಮಾಜಸೇವೆ ಎಂದು ಕೆಲವರನ್ನುತ್ತಿರುತ್ತಾರೆ. ಸಮಾಜವೆಂದರೆ ಏನೋ ತನಗೆ ತಿಳಿದಿರುವುದು ಸಮಾಜವೋ ಅಲ್ಲವೋ ಮೊದಲು ಆಲೋಚಿಸಿಕೊಳ್ಳಬೇಕು.

793. ಮನುಷ್ಯನಿಗೆ ಹೊರಗಿನ ಸಮಾಜವೆಂದು ಒಳಗಿನ ಸಮಾಜವೆಂದು ಎರಡು ಸಮಾಜಗಳಿರುವವು. ಒಂದು ನಿನಗೆ ಅವಶ್ಯಕ, ಎರಡನೆಯದು ನಿನಗೆ ಅನವಶ್ಯಕ.

794. ಕಣ್ಣು ತೆರೆದರೆ ದೃಶ್ಯವು (ಬೆಳಕು) ಕಣ್ಣು ಮುಚ್ಚಿದರೆ ಕತ್ತಲು, ಕಣ್ಣಿ ಹಿಂದೆಗಡೆ ಬೆಳಕು ಕತ್ತಲೆಗಳನ್ನು ನೋಡುವವನು ಯಾರು? ತೋರುವವನು ಯಾರು? ತಿಳಿದಿದೆಯಾ?

795. ಯಾವ ಊರಿಗೆ ಹೋದರು ನಿನ್ನ ಊರಿನಲ್ಲಿನ ಭೂಮಿ, ಗಾಳಿ ಇರುವಹಾಗೆ ಅಲ್ಲಿಯೂ ಕೂಡ ಅವೇ ಇರುವವು. ಅದೇ ವಿಧವಾಗಿ ಯಾವ ಶರೀರವನ್ನು ಸೇರಿ ನೋಡಿದರೂ ಮುಂದಿರುವ ಶರೀರದೊಳಗಿರುವವೇ ಇರುವವು.

796. ಇಲಿಯು ಬೆಕ್ಕನ್ನು ನೋಡಿದರೆ ಭಯಪಡುವುದು. ಬೆಕ್ಕು ನಾಯಿಯನ್ನು ನೋಡಿದರೆ ಭಯಪಡುವುದು. ನಾಯಿ ಹುಲಿಯನ್ನು ನೋಡಿದರೆ ಭಯಪಡುವುದು. ಹುಲಿ ಮನುಷ್ಯನನ್ನು ನೋಡಿದರೆ ಭಯಪಡುತ್ತದೆ. ಹೀಗೆ ಎಲ್ಲರಲ್ಲಿಯೂ ಭಯವು ನಾಟಿಕೊಂಡಿದೆ.

797. ಭಯವು ಪರಧರ್ಮವಾದ ಪ್ರಕೃತಿಧರ್ಮವು, ಧೈರ್ಯವು ಸ್ವಧರ್ಮವಾದ ಪರಮಾತ್ಮ ಧರ್ಮವು.

798. ಆಕಾಶಕ್ಕೆ ಅಂತ್ಯವಿಲ್ಲ ಎನ್ನುತ್ತಿರುತ್ತೇವೆ. ಆಕಾಶಕ್ಕೆ ಅಂತ್ಯವಿಲ್ಲದಿರುವಾಗ ಅದನ್ನು ಹುಟ್ಟಿಸಿದವನು ಇನ್ನೂ ಅಂತ್ಯವಿಲ್ಲದವನು ಮತ್ತು ತಿಳಿಯಲಾರದವನು.

799. "ನಿನ್ನ ಪ್ರಾಣಕ್ಕೆ ನನ್ನ ಪ್ರಾಣಕೊಡುವೆ" ಎನ್ನುವರು. ಆದರೆ ಹಾಗೆ ಯಾರಿಗಾದರು ಸಾಧ್ಯವಾಗುತ್ತದೆಯಾ? ನಿನ್ನ ಪ್ರಾಣವು ನಿಜಕ್ಕೂ ನಿನ್ನದೇನಾ? ನಿನ್ನದಲ್ಲದೆ ಇರುವುದನ್ನು ಹೇಗೆ ಕೊಡಬಲ್ಲೆ? ಆದ್ದರಿಂದ ಮಾತು ಅಂದರೂ ಯಾರು ಪ್ರಾಣವು ಕೊಡಲಾಗದೆ ಹೋಗುತ್ತಿರುವರು.

800. ಶೀಲವು ಹೋಗಿದೆಯೆನ್ನುತ್ತಾರೆ. ಶೀಲವು ಎಂದರೇನೊ ಗೊತ್ತಾ? ಶೀಲವು ನೀನು ಇಟ್ಟುಕೊಂಡಿರುವುದಲ್ಲ, ಯಾರಾದರು ತೆಗೆದುಕೊಂಡರೆ ಹೋಗುವುದಲ್ಲ. ಅದು ನಿನ್ನ ತಲೆಯಲ್ಲಿನದು.

801. ಪೋಲೀಸರು ಲಾಠೀಗಳಿಂದ ಕಳ್ಳನನ್ನು ಭಯವಿಡಬಹುದು. ಆದರೆ ಅವನ ತಲೆಯಲ್ಲಿನ ಬುದ್ಧಿಯನ್ನು ಬದಲಾಯಿಸಲಾರರು. ಕೈಯಲ್ಲಿ ಮಾಡಲಾಗದಿರುವುದನ್ನು ಬಾಯಿಂದ ಮಾಡಬಲ್ಲರೆಂದು ದೊಡ್ಡವರು ಹೇಳಿರುವರು. ಆದ್ದರಿಂದ ಪೊಲೀಸರು ಲಾಠಿಗಳನ್ನು ಬಿಟ್ಟು ಮಾತುಗಳಿಂದಲೇ ಹೇಳಬೇಕು.

802. ಕಳ್ಳರು ಮಾತುಗಳಿಂದ ಕೇಳರು. ಅವರಿಗೆ ಬೇಕಾಗಿರುವುದು ಲಾಠಿಗಳ ಹೊಡೆತವೆಂದೇ ಕೆಲವರು ತಿಳಿದುಕೊಳ್ಳಬಹುದು. ಆದರೆ ಅದು ಸರಿಯಾದ ಪದ್ಧತಿಯಲ್ಲ.

803. ಮಾತುಗಳು ಮಂತ್ರವಿದ್ದಹಾಗೆ. ಯಾವ ಮಂತ್ರವು ಯಾವ ರೋಗಕ್ಕೆಂದು ತಿಳಿಯದಿದ್ದರೆ ಮಂತ್ರವು ವ್ಯರ್ಥವಾಗುವುದು. ಹಾಗೆಯೇ ಕಳ್ಳನಿಗೆ ಬೇಕಾಗಿರುವ ಮಾತುಗಳನ್ನು ಹೇಳದಿದ್ದರೆ ಹೇಳಿದ ಮಾತುಗಳು ವ್ಯರ್ಥವಾಗುವವು. ಅವನು ಬದಲಾಗುವುದಿಲ್ಲ.

804. ಪ್ರತಿಮಾತು ಮಂತ್ರವೇಯೆಂದು ಯೋಗಿವೇಮನ ಕೂಡ ಹೇಳಿರುವನು. ಕಳ್ಳತನವನ್ನು ರೋಗವನ್ನು ಗುಣವುಮಾಡುವುದಕ್ಕೆ ಸರಿಯಾದ ಮಾತುಗಳನ್ನೇ ಉಪಯೋಗಿಸಬೇಕು.

805. ಯಾವುದಕ್ಕೆ ಯಾವ ಮಂತ್ರವು ಉಪಯೋಗಿಸಬೇಕೋ ಮಾಂತ್ರಿಕನಿಗೆ ಗೊತ್ತು. ಹಾಗೆಯೇ ಯಾರಿಗೆ ಯಾವ ಜ್ಞಾನದ ಮಾತುಗಳು ಹೇಳಬೇಕೋ ಗುರುವಿಗೇ ಗೊತ್ತು.

806. ಯಾವ ಪೊಲೀಸುಗಾದರು ಗುರುವಿದ್ದರೆ ಒಳ್ಳೆಯದು. ಗುರುವಿನಿಂದ ಲಭಿಸಿದ ಜ್ಞಾನದಿಂದ ಗರಣೆಕಟ್ಟಿರುವ ಅಪರಾಧಿಯನ್ನಾದರೂ ಬದಲಾಯಿಸಬಹುದು.

807. ನೀನು ಗುರುವಿನಿಂದ ಜ್ಞಾನವನ್ನು ಪಡೆದು, ಅದರಿಂದ ನಿನ್ನ ಜೀವನದಲ್ಲಿ ಒಬ್ಬನನ್ನಾದರು ಬದಲಾಯಿಸಿದರೆ ನಿನ್ನ ಜೀವನಕ್ಕೆ ಸಾರ್ಥಕತೆ ಕೈಗೂಡಿದಹಾಗೆ.

808. ಜ್ಯೋತಿಯಿಂದ ಸಂಪೂರ್ಣಕತ್ತಲಾದರು ಹೋಗುತ್ತದೆ. ಜ್ಞಾನದಿಂದ ಸಂಪೂರ್ಣ ಮೂರ್ಖನಾದರೂ ಬದಲಾಗಬಲ್ಲನು.

809. ದೀಪವು ಆಗ ಎದುರಾಗಿರುವ ವಸ್ತುವಿನಲ್ಲಿನ ಅಂದವನ್ನು ತನ್ನ ಬೆಳಕಿನ ಮೂಲಕ ತಿಳಿಸುತ್ತದೆ. ಹಾಗೆಯೇ ಜ್ಞಾನವು ಆಗ ಎದುರಾದ ಸಮಸ್ಯೆಯಲ್ಲಿನ ಸತ್ಯವನ್ನು ತನ್ನ ವಿವರದ ಮೂಲಕ ತಿಳಿಸುತ್ತದೆ.

810. ಹಾರದಲ್ಲಿ ದಾರವು ಅಡಗಿರುವುದು. ಶರೀರದಲ್ಲಿ ಆತ್ಮ ಅಡಗಿರುವುದು. ಹಾರದಲ್ಲಿನ ದಾರವನ್ನು ಸ್ಥೂಲವಾಗಿ ಹುಡುಕಿದರೆ ಕಾಣಿಸುತ್ತದೆ. ಹಾಗೆಯೇ ಶರೀರದಲ್ಲಿನ ಆತ್ಮವನ್ನು ಸೂಕ್ಷ್ಮವಾಗಿ ಹುಡುಕಿದರೆ ಕಾಣಿಸುತ್ತದೆ.

811. ದೇವರು ಭೂಮಿ ಮೇಲಕ್ಕೆ ಭಗವಂತನಾಗಿ ಬಂದರೆ ಯಾರು ಗುರುತಿಸಲಾರರು. ಆದರೂ ಗುರುತಿಸುವುದಕ್ಕೆ ಅವಕಾಶವು ಸೂಕ್ಷ್ಮವಾಗಿ ಇರುವವರಿಗೇ ಹೆಚ್ಚಾಗಿರುವುದು. ನಂತರ ಜ್ಞಾನಿಗಳಿಗೆ ಇರುವುದು.

812. ಹಾವು ತನ್ನದಪ್ಪಕ್ಕಿಂತಲೂ ಹತ್ತರಷ್ಟು ದೊಡ್ಡದಾದ ಪ್ರಾಣಿಯನ್ನಾದರು ಸುಲಭವಾಗಿ ನುಂಗುವುದು. ಹಾಗೆಯೇ ಮಾಯೆ ಹತ್ತು ವರ್ಷಗಳ ಜ್ಞಾನದ ಅನುಭವವು ಇರುವವರನ್ನಾದರೂ ಸುಲಭವಾಗಿ ತನ್ನಲ್ಲಿ ಬೆರೆಸಿಕೊಳ್ಳುವುದು.

813. ದೇವರಲ್ಲಿ ಬೆರೆತುಹೋಗಬೇಕೆಂದುಕೊಂಡ ನೀನು ಯಾರಲ್ಲಿ ಬೆರೆತಿರುವೆಯೋ ನೋಡಿಕೋ. ದೇವರೊಳಗೆ ಐಕ್ಯವಾಗುವ ಮುಂಚೆಯೇ ಮಾಯೆಯಲ್ಲಿ ಐಕ್ಯವಾಗುವ ಅವಕಾಶವು ಹೆಚ್ಚಾಗಿರುವುದು ಜಾಗ್ರತೆ!

814. ಜೀವಾತ್ಮ ರವೆಯಷ್ಟು! ಆತ್ಮ ಶರೀರವೆಲ್ಲಾ!! ಪರಮಾತ್ಮ ಬ್ರಹ್ಮಾಂಡವೆಲ್ಲಾ!!! ಮಾಯೆ ಗುಣವೆಲ್ಲಾ ಇರುವುದು.

815. ಗುಣ ಎಂದರೆ ಹೆಚ್ಚಿಸುವುದು. ಸಂದರ್ಭವನ್ನು ಅನುಸರಿಸಿ ಅವಶ್ಯವನ್ನು

ಅನುಸರಿಸಿ ಮಾಯೆ ತನ್ನನ್ನು ತಾನು ಹೆಚ್ಚಿಸಿಕೊಂಡು ಎಷ್ಟು ದೊಡ್ಡದಾಗಿಯಾದರೂ ಬೆಳೆಯಬಲ್ಲದು.

816. ತನ್ನನ್ನು ತಾನು ಎಷ್ಟಾದರು ಹೆಚ್ಚಿಸಿಕೊಳ್ಳುವುದು ಆದ್ದರಿಂದ ಮಾಯೆಯನ್ನು "ಗುಣ" ಎಂದು ಹೇಳುತ್ತೇವೆ. "ಗುಣ" ಎನ್ನುವುದು 12 ವಿಧಗಳಾಗಿ ಇರುವುದು. ಆದ್ದರಿಂದ ಮನುಷ್ಯನಿಗೆ 12 ಗುಣಗಳಿರುವವೆಂದು ಹೇಳುತ್ತಿರುವೆವು.

817. ಮುಗಿಯುವವನಿದ್ದರೆ ಯಾರಾದರೂ ಸ್ವಾಮಿ, ಗುರುವು ಆಗುವನು ಆದರೆ ಯಾರು ಮುಗಿಯಬೇಕು? ಯಾರು ಮುಗಿಸಿಕೊಳ್ಳಬೇಕು? ಎಂದು ತಿಳಿಯದ ಸ್ವಾಮೀಜಿಗಳು ಭೂಮಿಮೇಲೆ ಇರುವರು.

818. ಭೂಮಿಮೇಲೆ ಕದಲದ ವೃಕ್ಷಗಳು, ಕದಲುವ ವೃಕ್ಷಗಳೆಂದು ಎರಡು ವಿಧಗಳಿರುವವು. ಕದಲದ ವೃಕ್ಷಕ್ಕೆ ಕಾಯಿಗಳಿರುವಹಾಗೆ, ಕದಲುವ ವೃಕ್ಷಕ್ಕೆ ಕೂಡ ಕಾಯಿಗಳಿರುವವು. ಕದಲದ ವೃಕ್ಷಕ್ಕೆ ಒಂದೇ ಜಾತಿ ಒಂದೇ ವಿಧವಾದ ಕಾಯಿಗಳು ಬಿಟ್ಟರೆ, ಕದಲುವ ವೃಕ್ಷಕ್ಕೆ ಅನೇಕ ಜಾತಿಗಳ ಅನೇಕ ವಿಧಗಳ ಕಾಯಿಗಳು ಬಿಡುತ್ತಿರುವವು.

819. ಕದಲದ ವೃಕ್ಷವಾದ ಬೇವಿನ ಮರಕ್ಕೆ ಒಂದೇ ಹೆಸರಿರುವ ಬೇವಿನಕಾಯಿಗಳೇ ಬಿಡುವವು. ಅವು ಎಲ್ಲಾ ಕಹಿಯಾಗಿ ಒಂದೇ ರುಚಿಗೆ ಒಳಗಾಗಿರುವವು. ಕದಲುವ ವೃಕ್ಷವಾದ ಮನುಷ್ಯನಿಗೆ ಬೇರೆಬೇರೆ ಹೆಸರುಗಳಿರುವ ಕಾಯಿಗಳು ಬಿಡುತ್ತಿರುವವು. ಒಂದು ಕಾಯಿಯ ಹೆಸರು ಗುಂಡಿಗೆಕಾಯಿ ಆದರೆ, ಮತ್ತೊಂದು ಕಾಯಿಯ ಹೆಸರು ತಲೆಕಾಯಿ!

820. ದೇಶ ಪರಿಧಿಯಲ್ಲಿನ ರಾಜ್ಯಾಂಗವನ್ನು ತಿಳಿಸುವುದು ಕಾನೂನು. ಶರೀರ ಪರಿಧಿಯಲ್ಲಿನ ಯಂತ್ರಾಂಗವನ್ನು ತಿಳಿಸುವುದು ಧರ್ಮವು.

821. ನಾಸ್ತಿಕರನ್ನು ಶರೀರದ ಮೇಲೆ ಬಟ್ಟೆಗಳಿಲ್ಲದ ಹುಚ್ಚರಾಗಿ ಹೋಲಿಸಬಹುದು. ಹೇತುವಾದಿಗಳನ್ನು ಆಗಾಗ ಯಾರಬಳಿಯಾದರು ಬಟ್ಟೆಗಳಿಲ್ಲದ ವೇಶ್ಯರಾಗಿ ಹೋಲಿಸಬಹುದು. ಆಸ್ತಿಕರನ್ನು ಗಂಡನನ್ನು ಬಿಟ್ಟು ಯಾರಿಗೂ ತಿಳಿಯದೆ ಇತರರಜೊತೆ ಕೂಡೋ ಕುಲಗೆಟ್ಟವರಹಾಗೆ ಹೋಲಿಸಬಹುದು. ಆತ್ಮವಾದಿಗಳನ್ನು ತನ್ನ ಗಂಡನಜೊತೆ ಮಾತ್ರವೇ ಸಂಸಾರಮಾಡುವ ಪತಿವ್ರತೆಗಳಾಗಿ ಹೋಲಿಸಬಹುದು.

822. ಹೆತ್ತ ತಂದೆಯಿಂದ ಧನವನ್ನು ಹಕ್ಕಾಗಿ ಪಡೆಯಬಹುದು. ಆದರೆ ಅದು ನಿನ್ನ ಮರಣದಲ್ಲಿ ನಿನ್ನ ಹಿಂದೆ ಬರುವುದಿಲ್ಲ. ಗುರುವಿನಿಂದ ಜ್ಞಾನಧನವನ್ನು ಹಕ್ಕಾಗಿ ಪಡೆಯಬಹುದು. ಅದು ಸಾವಿನಲ್ಲಿ ನಿನ್ನ ಜೊತೆ ಬರುವುದು.



ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯವು ಅಲ್ಲ,
ಸತ್ಯವನ್ನು ಸಾವಿರಜನ ಅಲ್ಲವೆಂದರೂ ಅದು ಅಸತ್ಯವು ಅಲ್ಲ.



# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ**
} ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

---

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

—ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

Cell:09705864675, 09440556968, 09611133635

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಮೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







**ಸುವಾರ್ತ ಕ್ರೈಸ್ತವ ಸಂಘ (S.K.S)**

(Regd.No.: 159/2015)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

*www. suvarthakraisthavasangham.org*

